# ಕೊಡಗು  ಸಂಗಾತಿ

ಸಂಪಾದಕಿ : ಪಟ್ಟಡ ಶೀಲಾಮಣಿ

ಕನ್ನಡ ಮತ್ತು ಗೌಡ ಕನ್ನಡದ ಏಕೈಕ ಪಾಕ್ಷಿಕ ಪತ್ರಿಕೆ

**K.R.N.N. 240** ಸಂಪುಟ : 1 ಸಂಚಿಕೆ : 9 ಆಗಸ್ಟ್ 1 ರಿಂದ 15, 1997 ಪುಟಗಳು : 24 ರೂ. 5.







ಪುಣ್ಯನದಿ ಜನಿಸಿದಳು ತಲಕಾವೇರಿಯಲಿ, ಆರ್ಭಟಿಸಿ ಹರಿದಳು ಕನ್ನಂಬಾಡಿಯಲಿ

ಪರಮಪೂಜ್ಯಳೂ, ಲೋಕೋದ್ಧಾರಕಳೂ, ಜಗನ್ಮಾತೇ ಶ್ರೀ ಕಾವೇರಿ.

ಗೌಡ ಸಂಸ್ಕೃತಿ ಮತ್ತು ಅರೆಭಾಷೆ
ಇವುಗಳ ಉಳಿವಿಗಾಗಿ ಹಾಗು ಯುವ
ಶಕ್ತಿಯ ಸಂಘಟನೆಗಾಗಿ ನಿಮ್ಮ ತನು, ಮನ
ಧನವನ್ನು ಅರ್ಪಿಸಿ "ಕೊಡಗು ಸಂಗಾತಿ" ಪತ್ರಿಕೆ
ಯನ್ನು ಹೊರ ತಂದಿರುತ್ತೀರಿ. ಈ ಪತ್ರಿಕೆಯು ನಂದಾ
ದೀಪವಾಗಿ ಬೆಳಗಲೆಂದು ಹಾರೈಸುತ್ತೇವೆ.



ಯಿಂದ :—

ಶ್ರೀ ಉಳುವಾರನ ಸೋಮಯ್ಯ ರಮೇಶ್
ಶ್ರೀಮತಿ ಉಳುವಾರನ ಲಲಿತ ರಮೇಶ್

ಹಾಗೂ ಮಕ್ಕಳಾದ

ಕು॥ ರಾಕೇಶ್ ಕು॥ ದಿನೇಶ್

ನಂ. 124, 3ನೇ ಮುಖ್ಯ ರಸ್ತೆ, 3ನೇ ತಿರುವು
ಹೆಚ್. ಬಡಾವಣೆ, ರಾಮಕೃಷ್ಣನಗರ,
ಮೈಸೂರು–570 023

ದೂರವಾಣಿ : 566559

---

# ಮೈಸೂರಿನಲ್ಲಿ ಮಹಿಳಾ ಸಂಘಟನೆ

ಅರೆಭಾಷಿಕ ಜನಾಂಗದ ಮಹಿಳಾ ಸಂಘಟನೆಯ ರಚನೆ ಅವಶ್ಯಕ. ಇದಕ್ಕಾಗಿ ಮುಕ್ತವಾಗಿ ಚರ್ಚಿಸಲು ತಮಗೆಲ್ಲರಿಗೂ ಹಾರ್ದಿಕ ಸ್ವಾಗತ.

ದಿನಾಂಕ : **18-8-97**ನೇ ಸೋಮವಾರ ಮಧ್ಯಾಹ್ನ **2** ರಿಂದ **4** ಗಂಟೆ ವರೆಗೆ

ಸ್ಥಳ : ಕೊಡಗು ಗೌಡ ವಿದ್ಯಾರ್ಥಿ ನಿಲಯ, ಜಯಲಕ್ಷ್ಮಿಪುರಂ, ಮೈಸೂರು–12
ತಮಗೆಲ್ಲರಿಗೂ ಆದರದ ಸುಸ್ವಾಗತ

ಸಂಚಾಲಕಿ : ಧನು ಚೆರಿಯಮನೆ

## ಕೊಡಗು ಸಂಗಾತಿ

ಸಂಪಾದಕಿ, ಪ್ರಕಾಶಕಿ :
**ಪಟ್ಟಡ ಪಿ. ಶೀಲಾಮಣಿ**

ಉಪ ಸಂಪಾದಕ :
**ಕಟ್ರತನ ಸಿ. ಜಯರಾಂ**

ಸಹ ಸಂಪಾದಕ :
**ಹುಲಿಮನೆ ರಮೇಶ್**

ವರದಿಗಾರ :
**ಪಟ್ಟಡ ಎಲ್. ಶಿವಕುಮಾರ್**

ಕಛೇರಿ ನಿರ್ವಹಣೆ :
**ಪಟ್ಟಡ ಪಿ. ದೀಪಕ್**
**ಹೊಸೊಕ್ಲು ಹರಿಣಿ ಬೆಳ್ಯಪ್ಪ**
**ಮುಂಞ್ಞಾಪುರ ಧರಣಿ ಗಣಪತಿ**

ಮುದ್ರಣ :
**ಮುಂಞ್ಞಂಡ್ರ ಕೆ. ತಮ್ಮಯ್ಯ**
**ಆಶೀರ್ವಾದ್ ಪ್ರಿಂಟರ್ಸ್,**
ವಿನಾಯಕನಗರ, ಮೈಸೂರು–12

ಗೌರವ ವ್ಯವಸ್ಥಾಪಕ :
**ಪಟ್ಟಡ ಎಂ. ಪ್ರಭಾಕರ್**

ಜಾಹೀರಾತು ಪ್ರಸಾರ ಕಛೇರಿ :

**ಕೊಡಗು ಸಂಗಾತಿ**
ನಂ. 322, ಬೋಗಾದಿ ಸರ್ಕಲ್
ಹಿನಕಲ್ ಪೋಸ್ಟ್, ಮೈಸೂರು–17

## ಒಳನೋಟ

ಪುಟಗಳು

- ಸಂಪಾದಕೀಯ 2
- ಸಂದರ್ಶನ–ಶ್ರೀ ನಂಜಯ್ಯನ ಮನೆ ಎಸ್. ದೇವಿಪ್ರಸಾದ್ 3
- ಗೌಡರ ವಿವಾಹ ಪದ್ಧತಿಗಳು (ಮುಂದುವರಿದ ಭಾಗ) 5
- ಹಾಂಗ್‌ಕಾಂಗ್‌ನಲ್ಲಿ ಭಾರತೀಯನ ಬವಣೆ 7
- ನಾಟಿ ಮಾಡಲು ಯಂತ್ರ 8
- ವ್ಯಕ್ತಿ ಪರಿಚಯ–ಶ್ರೀಮತಿ ಅಮೆಮನೆ ಕಮಲಾ ಗಣಪತಿ 9
- ಸಂಪ್ರದಾಯದ ಬಗ್ಗೆ ಒಂದು ಕಿರು ನೋಟ 11
- ಮಂಥನ 12
- 1837ರ ಸ್ವಾತಂತ್ರ್ಯ ಸಂಗ್ರಾಮ 14
- ನಿಮ್ಮ ಪತ್ರಗಳು 16

### ಅರೆ ಭಾಷೆಲ್ ವಿಭಾಗ

- ರಾಜು ಕಂಡ ಪಿಶಾಚಿ 17
- ಭಾರತದ ಸ್ವಾತಂತ್ರ್ಯಕ್ಕೆ 50 ವರ್ಷ–ವಿಡಂಬನೆ 18
- ನಮ್ಮ ಭಾಸೆ ಮತ್ತೆ ನಮ್ಮ ಜೆನ 20

**ಚಂದಾ ವಿವರ**

| | | |
|---|---|---|
| ಬಿಡಿ ಪ್ರತಿ | : | 5 ರೂ. |
| ಅರ್ಧ ವಾರ್ಷಿಕ | : | 60 ರೂ. |
| ವಾರ್ಷಿಕ ಚಂದಾ | : | 120 ರೂ. |

## ಸಂಪಾದಕೀಯ :–

### ಹೀಗೊಂದು ಪತ್ರ

ನಿಮ್ಮ ಪತ್ರಿಕಾ ಬಳಗದವರು ಒಬ್ಬರಿಗೊಬ್ಬರು ಸಹಾಯ ಮಾಡಿಕೊಂಡು ಯಾವುದೇ ಫಲಾಪೇಕ್ಷೆ ನಿರೀಕ್ಷಿಸದೇ ಕಾರ್ಯ ನಿರ್ವಹಿಸುತ್ತಿರುವುದು ತುಂಬಾ ಶ್ಲಾಘನೀಯ. ನಿಮ್ಮ ಕನ್ನಡದ ಶೈಲಿಯನ್ನು ಮೆಚ್ಚಿದೆ. ಈ ರೀತಿಯ ಹುರುಪು ಇನ್ನು ಮುಂದೆಯೂ ಇದ್ದು, ಮುನ್ನಡೆದರೆ ಖಂಡಿತವಾಗಿಯೂ ನಮ್ಮ ಸಮಾಜದಲ್ಲಿ ತುಂಬಿರುವ ಜಡತನವನ್ನು ತೊರೆದು, ಜನಜಾಗೃತಿ ಉಂಟುಮಾಡುವಲ್ಲಿ ನೀವು ಖಂಡಿತವಾಗಿಯೂ ಯಶಸ್ವಿಯಾಗುವಿರಿ. ಈ ಕೆಲಸ ಎರಡು ದಶಕಗಳ ಹಿಂದೆಯೇ ಆಗಬೇಕಿತ್ತು. ಈ ಹಿಂದೆ ನಮ್ಮವರೊಬ್ಬರು ಪತ್ರಿಕೆ ನಡೆಸಿದಾಗ ನಿಮ್ಮಂತೇ ವಿಶಾಲ ಹೃದಯದವರು ಆಗ ನಮಗೆ ಸಿಕ್ಕಿರಲಿಲ್ಲ. ನಾನು ನನ್ನ ಕೈಯಲ್ಲಾದ ಸಹಕಾರವನ್ನು ನೀಡಿದರೂ, ಕೆಲವು ದೋಷದ ಗುಣದಿಂದ ಪತ್ರಿಕೆ ನಿಂತು ಹೋದದ್ದು ನಮ್ಮ ಜನಾಂಗಕ್ಕಾದ ಘೋರ ನಷ್ಟ. ಈ ಸ್ಥಾನವನ್ನು ಈಗ ನೀವು ತುಂಬಿದ್ದೀರಿ. ಸಮಾಜ ಸೇವೆ ಒಂದು ಕಠಿಣವಾದ ಹಾದೀ ಅದರಲ್ಲಿ ಅನೇಕ ಟೀಕೆಗಳು ಬರುತ್ತವೆ. ಆದರೆ ಕಾರ್ಯಕರ್ತರು ನೀತಿಯಿಂದ ನೇರವಾದ ಮಾರ್ಗದಿಂದ ನಡೆದರೆ ಅದರಲ್ಲಿ ಸಿಗುವ ತೃಪ್ತಿ ಬೇರೆ ಯಾವ ಮಾಧ್ಯಮದಿಂದಲೂ ಸಿಗದು. ನೀವು ಮಾಡುವ ತ್ಯಾಗ ಹಿಂದಿನ ಜನ್ಮದ ಸುಪ್ರಿತ ಫಲವೇ ಸರಿ.

**ಮಹಾಜನತೆಗೆ ಕರೆ :**

ಸಂಚಿಕೆ 7ರ ಸಂಪಾದಕೀಯ ತುಂಬಾ ಅರ್ಥಪೂರ್ಣವಾದದ್ದು. ನನ್ನ ಮನಸ್ಸಿನ ಈ ಅಭಿಪ್ರಾಯವನ್ನು ಹಲವು ವರ್ಷಗಳ ಹಿಂದೆ ಹೇಳಿದ್ದೆ. ಆದರೆ ತಾವು ಸಂಪಾದಕೀಯ ಮೂಲಕ ವ್ಯಕ್ತ ಪಡಿಸಿರುವುದು ನಿಜವಾಗಿಯೂ ಶ್ಲಾಘನೀಯ. 7 ಸಾವಿರ ವರ್ಷಗಳಿಂದ ನಮ್ಮ ಹಿರಿಯರು ಕಾಪಾಡಿಕೊಂಡು ಬಂದ ನಮ್ಮ ಸಂಸ್ಕೃತಿ ಈಗ ಸುಮಾರು 50 ವರ್ಷಗಳಿಂದ ದಿನೇ ದಿನೇ ಮಾಯವಾಗುತ್ತಾ ಬರುತ್ತಿದ್ದು ಇನ್ನು ಕೆಲವೇ ವರ್ಷಗಳು ಕಳೆದರೆ ಗೌಡರ ವಿವಾಹ ಕಾಲದಲ್ಲಿ ಹಾಡುತ್ತಿದ್ದ ಸೋಬಾನೆಗಳೆಲ್ಲಾ ಮರೆತು ಹೋಗಬಹುದು. ವಿದ್ಯಾವಂತರು ಹಣವಂತರು ಪಾಶ್ಚಿಮಾತ್ಯದ ನಾಗರೀಕತೆಯ ಸೋಗಿಗೆ ಮನಸೋತು ನಮ್ಮನ್ನು ನಾವೇ ಮರೆತಿದ್ದೇವೆ. ನಮ್ಮ ತನಕ್ಕೆ ಬೆಲೆಯೇ ಇಲ್ಲವಾಗಿದೆ. ಸಮಾಜದಲ್ಲಿ ವಿವಾಹ ಸಂದರ್ಭದಲ್ಲಿ ಪಾಶ್ಚಿಮಾತ್ಯ ರೀತಿಯ ಮಿನಿ ಬಾರ್‌ಗಳು ಪ್ರಾರಂಭವಾಗಿ, ಒಬ್ಬರಿಗೊಬ್ಬರ ಪ್ರತಿಷ್ಠೆಯ ಕಣವಾಗಿ, ಬೇರೆ ಜನಾಂಗಗಳಲ್ಲಿರುವ ವರದಕ್ಷಿಣೆಯ ಸೋಂಕು, ನಮ್ಮ ಸಮಾಜಕ್ಕೂ ಬಡಿದಿದೆ, ಮದುವೆಯ ದುಂದು ವೆಚ್ಚಗಳನ್ನು ಸರಿಪಡಿಸುವುದಕ್ಕೆ ನಮಗೊಬ್ಬ ಮುಂದಾಳು ಈಗ ಅತ್ಯಾವಶ್ಯಕವಾಗಿ ಬೇಕಾಗಿದೆ. ಇದು ರಾಜಕೀಯ ಮುಂದಾಳುಗಳಿಂದ ಸಾಧ್ಯವಿಲ್ಲ. ಒಬ್ಬ ಸಮಾಜಿಕ ಮುಂದಾಳು ಬೇಕೀಗ. ಆ ವ್ಯಕ್ತಿ ಸಿಂಹನಷ್ಟು ಗಾಂಭೀರ್ಯ, ವಿವೇಕಾನಂದರ ವಿದ್ಯುನ್ಮಣಿಯಾಗಿರಬೇಕು. ಇಂತಹವರನ್ನು ಸಮಾಜ ನಿರೂಪಿಸಬೇಕು. ಅಂತವರೆ ನಮ್ಮ ಗುರು ಆಗಬೇಕು. ಈ ಗುರು ಕೊಡಗಿನ ಹಾಗೂ ದ.ಕ. ಗೌಡರ ಸಂಸ್ಕೃತಿಯನ್ನು ಕಾರ್ಯಗತ ಮಾಡುವಂತಿರಬೇಕು. ಇದಕ್ಕೊಂದು ನಮ್ಮ ಸಮಾಜದವರದೆಂದೇ ಮಠ ಬೇಕು. ಇದಕ್ಕೆ ಎರಡು ಜಿಲ್ಲೆಗಳ ಗೌಡ ಸಮಾಜಗಳು ಸಂಬಂಧವನ್ನು ಕಲ್ಪಿಸಬೇಕು. ಇದರಿಂದ ನಮ್ಮ ಸಮಾಜದ ಸಂಸ್ಕೃತಿಯ ಉಳಿವು ಹಾಗೂ ಸಮಾಜದ ಜನರ ಸುವ್ಯವಸ್ಥೆಯಾಗಬಹುದು. ಇಂತಹ ಕಾರ್ಯಕ್ಕೆ ನನ್ನ ಕೈಲಾದ ಸೇವೆಯನ್ನು ಮಾಡುತ್ತೇನೆಂದು ಭರವಸೆ ಕೊಡುತ್ತೇನೆ.

**ಪತ್ರಿಕೆಯ ಅವಶ್ಯಕತೆ :**

ಆದ್ದರಿಂದ ಸಮಾಜದ ಬಂಧು ಭಗನಿಯರೇ ಕೊಡಗು ಸಂಗಾತಿ ಪತ್ರಿಕೆಯು ಗೌಡರ ಚರಿತ್ರೆ, ಸಂಸ್ಕೃತಿ, ಸಾಮಾಜಿಕ ಜೀವನವನ್ನು ಪ್ರತಿಬಿಂಬಿಸುವ ಏಕೈಕ ಪತ್ರಿಕೆ. ಗೌಡರ ಪ್ರತಿಯೊಂದು ಕುಟುಂಬದವರು ಈ ಪತ್ರಿಕೆಯನ್ನು ಕೊಂಡು ಓದಿ ಮುಂದಿನ ಯುವಕ ಯುವತಿಯರು ತಮ್ಮ ಸಮಾಜದ ವಿಷಯ ತಿಳಿದುಕೊಳ್ಳುವಂತಾಗಲೀ ಎಂದು ಈ ಪತ್ರಿಕೆಯನ್ನು ಪ್ರಕಟಿಸುತ್ತಿದ್ದೇವೆ. ಗೌಡರಿಗೆ ತಮ್ಮ ಅಭಿಪ್ರಾಯವನ್ನು, ಸಮಾಜದ ಮಹಾ ಜನತೆಗೆ ತಿಳಿಸಲು ಸಿಕ್ಕಿದ ಸುವರ್ಣಾವಕಾಶವನ್ನು ಕಳೆದುಕೊಳ್ಳಬಾರದು. ನಿಮ್ಮೆಲ್ಲರ ಸಹಾನುಭೂತಿ, ಸಹಕಾರದಿಂದ ನಮ್ಮ ಸಮಾಜದ ಸಂಸ್ಕೃತಿಯನ್ನು ಹೆಚ್ಚಿನದಾಗಿ ಉಳಿಸಿಕೊಂಡು 21ನೇ ಶತಮಾನದ ಅಭಿವೃದ್ಧಿಯತ್ತ ಸಾಗಲು ಸಹಕರಿಸಿ ಪ್ರೋತ್ಸಾಹಿಸಲು ಇಂದೇ “ಕೊಡಗು ಸಂಗಾತಿ”ಯ ಸದಸ್ಯರಾಗಿಯೋ ಚಂದಾದಾರರಾಗಿಯೋ, ಜೀವಾವಧಿ ಸದಸ್ಯತ್ವನ ಹೊಂದಿಯೋ, ಇಲ್ಲವೇ ಶುಭಾಶಯ, ಜಾಹೀರಾತು ಕೊಟ್ಟು ಪತ್ರಿಕೆ ಬೆಳೆಯುವಲ್ಲಿ ಸಹಕರಿಸಬೇಕೆಂದು ನಾನು ಕೈ ಜೋಡಿಸಿ ಬೇಡಿಕೊಳ್ಳುತ್ತಿದ್ದೇನೆ.

● **ಶ್ರೀ ಪೂಜಾರಿ ಮೊಣ್ಣಪ್ಪ,** ಅಧ್ಯಕ್ಷರು
ಕೊಡಗು ಮತ್ತು ದ. ಕ. ಗೌಡ ಸಮಾಜ,
ಬೆಂಗಳೂರು.

# ಸಂಸ್ಕೃತಿಯ ರಕ್ಷಣೆಗೆ ಟೊಂಕಕಟ್ಟಿ ನಿಂತಿರುವ ನಂಜಯ್ಯನ ಮನೆ ಎಸ್. ದೇವಿಪ್ರಸಾದ್

ಗೌಡ ಸಂಸ್ಕೃತಿಯ ಉಳಿವಿಗಾಗಿ ಅವಿರತ ಹೋರಾಟಗಾರ, ಸಂಘಟಕ, ಕಲಾವಿದ, ಸಮಾಜ ಸೇವಕ ಇವರ ಬಗ್ಗೆ ಹೇಳುತ್ತಾ ಹೋದರೆ ಅಂತ್ಯವೇ ಕಾಣದು. ವಂಶ ಪಾರಂಪರ್ಯವಾಗಿ ಹರಿದು ಬಂದಿರುವ ಸಮಾಜ ಸೇವೆ, ಜನಸೇವೆಯನ್ನು ಮುಂದು ವರೆಸಿ ಎಲ್ಲರಿಗೂ ಚಿರಪರಿಚಿತರಾದ ಮೇರು ವ್ಯಕ್ತಿಯೇ ಶ್ರೀ ಎನ್. ಎಸ್. ದೇವಿಪ್ರಸಾದ್. ಇವರ ಆದರ್ಶಗಳು ಎಲ್ಲ ರಲ್ಲೂ ನೆಲೆಯೂರಲಿ ಎಂಬ ಉದ್ದೇಶದಿಂದ ಸಂಗಾತಿಯು ಇವರನ್ನು ಮಾತಿಗೆಳೆದಾಗ ಅವರ ಅಂತರಾಳದಿಂದ ಮೂಡಿಬಂದ ಮಾರ್ನುಡಿಗಳನ್ನು ತಮ್ಮ ಮುಂದಿಡು ತ್ತಿದ್ದೇವೆ.

ಸಂಗಾತಿ : ನಮ್ಮ ಓದುಗರಿಗೆ ತಮ್ಮ ಪರಿಚಯ ಮಾಡಿಕೊಡುವಿರಾ ?

ಉ : ನನ್ನ ತಂದೆಯವರ ಹೆಸರು ಸಣ್ಣಯ್ಯ ಪಟೇಲರೆಂದು, ಆಗಿನ ಕಾಲದ ಪ್ರಖ್ಯಾತ ವ್ಯಕ್ತಿಯಾಗಿದ್ದವರು. ಅವರ ಸಮಾಜ ಸೇವೆಯನ್ನು ಗುರುತಿಸಿ ರಾಜ್ಯ ಸರ್ಕಾರ 1954ರಲ್ಲಿ ರಾಜ್ಯ ಪ್ರಶಸ್ತಿ

ಸಂದರ್ಶನ ಲೇಖನ :
**ಪಟ್ಟಡ ಶಿವಕುಮಾರ್**

ಯನ್ನು ನೀಡಿ ಗೌರವಿಸಿತು. ಬಹುಶಃ ನಮ್ಮ ಜನಾಂಗದಲ್ಲಿ ಪ್ರಶಸ್ತಿ ಪಡೆದ ಮೊದಲ ವ್ಯಕ್ತಿಯೇ ಅವರು ಎನ್ನ ಬಹುದು. ನಾನು ಮೈಸೂರು ಮಹಾರಾಜಾ ಕಾಲೇ ಜಿನಲ್ಲಿ ಬಿ. ಎ. ಪದವಿ ಪಡೆದ ಬಳಿಕ ಕಾನೂನು ಪದವಿಗೋಸ್ಕರ ಮುಂಬಯಿಗೆ ಹೋದೆ. ಆದರೆ ಅಲ್ಲಿ ಪತ್ರಿಕೋದ್ಯಮದ ಪದವಿ ಪಡೆದು ಹಿಂತಿರುಗಿದೆ.

ಸಂಗಾತಿ : ವಿದ್ಯಾಭ್ಯಾಸದ ಬಳಿಕ ಉದ್ಯೋಗದ ಕಡೆ ಗಮನ ಹರಿಸಿದ್ದೀರ ?

ಉ : ಇಲ್ಲ, ಮರಳಿ ಕೃಷಿಗೆ ಬಂದೆ. ಅಂತೆಯೇ ಜನಸೇವೆಗೆ ತೊಡಗಿದೆ. ನಮ್ಮೂರಿನಲ್ಲಿ ಹೈಸ್ಕೂಲ್ ಸ್ಥಾಪಿಸಲು



**ಎಸ್. ದೇವಿಪ್ರಸಾದ್,** ಸಂಪಾಜೆ

ಅವಕಾಶವಾಯ್ತು. ಅದರಲ್ಲಿ 30 ವರ್ಷ ಗಳ ಕಾಲ ಸಂಚಾಲಕನಾಗಿ ಕೆಲಸ ಮಾಡಿದೆ. ಮನೆಯ ಹಕ್ಕಿನ ಪ್ರಕಾರ ವಂಶಪಾರಂಪರ್ಯ ವಾಗಿ ಒದಗಿ ಬಂದ ದೇವಾಲಯಗಳ ಮುಖ್ಯಸ್ಥಗಾರಿಕೆಯನ್ನು ನಿರ್ವಹಿಸಿದೆ.

ಸಂಗಾತಿ : ಗೌಡ ಜನಾಂಗದ ಏಳಿಗೆ ಗಾಗಿ ನಿಮ್ಮ ಕೊಡುಗೆಗಳೇನು ?

ಉ : ಮೈಸೂರಿನಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವಾಗಲೇ ಕೊಡಗು ಮತ್ತು ದ. ಕನ್ನಡ ಗೌಡ ವಿದ್ಯಾರ್ಥಿನಿಲಯ ಸ್ಥಾಪಿಸುವಲ್ಲಿ ದುಡಿದೆನು. ಅದೇ ಜಾಗ ದಲ್ಲಿ ಕಟ್ಟಡ ನಿರ್ಮಿಸುವುದಕ್ಕೋಸ್ಕರ ಮನೆ ಮನೆ ಸುತ್ತಿದ್ದೆವು. ಆ ಸಂದರ್ಭ ದಲ್ಲಿ ಪಾಂಡನ ಸುಬ್ಬಯ್ಯನವರು, ಕುದು ಪಜೆ ಕೃಷ್ಣಪ್ಪನವರು, ದಂಬೆಕೋಡಿ ಸುಬ್ರಾಯನವರು, ಪೇರಿಯನ ಪೂವಯ್ಯ ನವರು, ತೋಟಂಬೈಲು ನಾಣಯ್ಯನವರೂ ಬಹಳ ಶ್ರಮಿಸಿದ್ದರು. ನನ್ನ ತಂದೆಯ ಹೆಸರಿನಲ್ಲಿ ಅಲ್ಲಿನ ಕಟ್ಟಡಕ್ಕೆ 25,000 ರೂ.ಗಳನ್ನೂ, ಮಡಿಕೇರಿಯ ಕಟ್ಟಡಕ್ಕೆ 25,000 ರೂ.ಗಳನ್ನು ನೀಡಿದ್ದೇನೆ. ಇದೆಲ್ಲ ಸಣ್ಣ ವಿಚಾರ, ಇವುಗಳೆಲ್ಲಕ್ಕಿಂತ ಮುಖ್ಯವಾಗಿ 1985ನೇ ಇಸವಿಯಲ್ಲಿ ಸಮ್ಮೇಳನವನ್ನ ಸಂಘಟಿಸಿದ್ದು. ಆ ಸಮ್ಮೇಳನದ ಸ್ವಾಗತ ಸಮಿತಿಯ ಸಂಚಾ ಲಕನಾಗಿದ್ದೆ. ಮತ್ತು ಗೌಡರೆಲ್ಲರೂ ಒಂದೇ ಎಂಬುದನ್ನು ನಾವು ಪ್ರತಿಬಿಂಬಿಸಿ ದೆವು. 1996ರಲ್ಲಿ ಪುನಃ ಸಮ್ಮೇಳನ ವಾದಾಗ ನಾನು ಸ್ವಾಗತ ಸಮಿತಿಯ ಗೌರವಾಧ್ಯಕ್ಷನಾಗಿಯೂ ದುಡಿದಿದ್ದೇನೆ. ಗೌಡ ಜನಾಂಗವೂ ಸಹ ನನಗೆ ಒಳ್ಳೆಯ ಮಹತ್ವ ನೀಡಿದ್ದಾರೆ.

ಸಂಗಾತಿ : ನೀವು ಇಷ್ಟೆಲ್ಲಾ ಕಾರ್ಯ ಗಳನ್ನು ನಿರ್ವಹಿಸಲು ಪ್ರೇರಣೆಯೇನು ?

ಉ : ನಮ್ಮ ತಂದೆಯವರು 1921ರಲ್ಲಿ ದ. ಕನ್ನಡ ಗೌಡ ವಿದ್ಯಾಸಂಘದಲ್ಲಿ ಕಾರ್ಯ ದರ್ಶಿಯಾಗಿದ್ದವರು. ಅನಂತರ 30ವರ್ಷ ಅಧ್ಯಕ್ಷರಾಗಿದ್ದವರು. ಒಮ್ಮೆ ಅನಾರೋಗ್ಯ ದಿಂದ ಹಾಸಿಗೆ ಹಿಡಿದಾಗ, ದೇವಪ್ಪಜ್ಜನ ವೀರಪ್ಪಗೌಡರು ಉಪಾಧ್ಯಕ್ಷರಾಗಿದ್ದರು. ಅವರೂ ಸೇರಿದಂತೆ ಹಲವಾರು ಮುಂದಾಳು ಗಳು ಮನೆಗೆ ಬಂದು, ನೀವು ಅಧ್ಯಕ್ಷಗಾದಿ ಯಲ್ಲೇ ಮುಂದುವರಿಯಬೇಕು. ಕೆಲಸ ಕಾರ್ಯಗಳನ್ನು ನಾವೇ ನಿರ್ವಹಿಸುತ್ತೇವೆ. ಎಂದು ಮನವಿ ಮಾಡಿದಾಗ, ಸಮಾಜ ಸೇವೆಯ ಮಹತ್ವ ತಿಳಿದು ಅದೇ ನನಗೆ ಪ್ರೇರಣೆಯಾಯ್ತು.

ಸಂಗಾತಿ : ನಿಮ್ಮ ಕಾರ್ಯಗಳು ನಿಮಗೆ ತೃಪ್ತಿ ತಂದಿವೆಯೇ ?

ಉ : ನನಗೆ ತೃಪ್ತಿ ತಂದಿದೆ. ಕೆಲವು ಅಡೆ ತಡೆಗಳು ಬರುತ್ತಿವೆಯಾದರೂ ಅವು ಗಳಿಗೆ ಲಕ್ಷ್ಯ ಕೊಡಲಾರೆ. ಹಲವು ಯುವಕರು ನನ್ನ ಬೆನ್ನಿಗಿದ್ದಾರೆ. ಅದೇ ನನಗೆ ಸಂತೋಷ.

ಸಂಗಾತಿ : ಇಂದಿನ ಗೌಡ ಸಂಸ್ಥೆ ನಿಮ್ಮ ಅಭಿಪ್ರಾಯವೇನು ?

ಉ : ಆಗ ಕಲ್ಯಾಣ ಮಂಟಪಗಳನ್ನು ಸ್ಥಾಪಿಸುವುದು, ಈಗ ಅದರಿಂದ ಹಣ ಮಾಡುವುದು ಆಗಿಬಿಟ್ಟಿದೆ. ಈಗ ಹಲವಾರು ಹಾಸ್ಟೇಲ್‌ಗಳು ನಿರ್ಮಾಣವಾಗುತ್ತಿರುವುದರಿಂದ ಹಾಸ್ಟೆಲ್‌ಗಳ ಅಗತ್ಯ ಕಂಡುಬರುವುದಿಲ್ಲ. ಅಂದಂದಿನ ಅಗತ್ಯಗಳಿಗೆ ತಕ್ಕಂತೆ ಸಂಸ್ಥೆಗಳು ಹೊಂದಿಕೊಂಡು ಹೋಗುವುದು ಇಂದಿನ ಅಗತ್ಯವಾಗಿದೆ. ಇವೆಲ್ಲಕ್ಕಿಂತಲೂ ಮುಖ್ಯವಾಗಿ ಈಗ ನಮಗೊಂದು ರಾಜಕೀಯವಾಗಿ ಮುಂದುವರಿಯಲು ಒಂದು ಸಂಸ್ಥೆಯ ಅಗತ್ಯವಿದೆ.

ಸಂಗಾತಿ : ತಾವು ಒಬ್ಬ ಕಲಾವಿದನಾಗಿ ಮಾಡಿದ ಕಾರ್ಯಗಳಾವುವು ?

ಉ : ನನ್ನ "ಮೂರು ದಾರಿಗಳು" ಚಿತ್ರಕ್ಕೆ 1980ರಲ್ಲಿ 5 ರಾಜ್ಯ ಪ್ರಶಸ್ತಿಗಳು, ಒಂದು ಪ್ರತಿಷ್ಠಿತ ರಾಷ್ಟ್ರ ಪ್ರಶಸ್ತಿ ಬಂದಿತ್ತು. ಅದರಲ್ಲಿ ಬಂಡವಾಳ ಮತ್ತು ಹಂಚಿಕೆಯನ್ನು ಮಾತ್ರ ನಿರ್ವಹಿಸಿದ್ದೆ. ಆದರೆ ನಂತರ "ಶಿರಾಡಿ ಭೂತ" ಎಂಬ ಚಿತ್ರಕ್ಕೆ ನಿರ್ದೇಶನವನ್ನು ನಾನೇ ಮಾಡಿದ್ದೇನೆ. ಅದರಲ್ಲಿ ನಟನಾಗಿಯೂ ಭಾಗವಹಿಸಿದ್ದೇನೆ. ನಂತರ "ಕಿಟ್ಟಿ ಕತೆ" ಎಂಬ ನಾಟಕವನ್ನೂ ನಿರ್ದೇಶಿಸಿದ್ದೇನೆ. ಆಗ ಹಲವಾರು ಪ್ರಶಸ್ತಿಗಳು ಸಂದಿವೆ. ಇದರ ಜೊತೆಗೆ ಗ್ರಾಮೀಣ ವಿದ್ಯಾರ್ಥಿಗಳಿಗೆ ರಂಗಾಯಣದ ತರಬೇತಿ ನೀಡಲು ಒಂದು ಶಿಬಿರವನ್ನು ಸಂಘಟಿಸಿ ಅದರಲ್ಲಿ ಮುಖ್ಯ ಪಾತ್ರ ನಿರ್ವಹಿಸಿದ್ದೇನೆ. ಈ ಎಲ್ಲಾ ಕಾರ್ಯಗಳಿಂದ ನನಗೆ ಪ್ರಾಶಸ್ತ್ಯ ಲಭಿಸಿ, ಹಲವಾರು ಕಡೆ ನನ್ನ ಕೈಯಿಂದಲೇ ಎಷ್ಟೋ ಜನರಿಗೆ ಸನ್ಮಾನ ಮಾಡಿಸುತ್ತಿದ್ದಾರೆ.

ಸಂಗಾತಿ : ಗೌಡ ಜನಾಂಗಕ್ಕೆ ನಿಮ್ಮ ಕರೆಯೇನು ?

ಉ : ನಾವು ಹಿಂದುಳಿದವರೆಂಬ ಕೀಳರಿಮೆಯನ್ನು ಬಿಡಬೇಕು. ಒಬ್ಬ ಶ್ರೇಷ್ಠ ಮತ್ತೊಬ್ಬ ಕನಿಷ್ಠ ಎಂಬ ಭಾವನೆ ತೊಲಗಬೇಕು. ಎಲ್ಲಾ ಜಾತಿಯವರನ್ನೂ ಸಮನಾಗಿ ಕಾಣಬೇಕು. ಅದರೊಳಗೆ ನಮ್ಮ ಸಂಸ್ಕೃತಿಯನ್ನು ಪ್ರತಿಬಿಂಬಿಸಿ ರಕ್ಷಿಸಿಕೊಳ್ಳಬೇಕು. ಇನ್ನೊಬ್ಬರ ಸಂಸ್ಕೃತಿಯನ್ನು ಯಾರೇ ಆಗಲಿ ದೂಷಿಸಕೂಡದು.

ಸಂಗಾತಿ : ಗೌಡ ಇತಿಹಾಸದ ಬಗ್ಗೆ ನಿಮ್ಮ ಅನಿಸಿಕೆಯೇನು ?

ಉ : ನಮ್ಮಲ್ಲಿ ಕೊಡಗಿನವರು ಬೇರೆ, ಕನ್ನಡ ಜಿಲ್ಲೆಯವರು ಬೇರೆ, ಒಕ್ಕಲಿಗರು ಬೇರೆ ಎಂಬ ಭಾವನೆಯಿದೆ. ಅದು ಶುದ್ಧ ತಪ್ಪು. 1804ರಲ್ಲಿ ನಾವು ಎಲ್ಲಿದ್ದೇವೆಯೋ ಇಂದು ಸಹ ಅಲ್ಲೇ ಇದ್ದೇವೆ. ನಮ್ಮ ಪ್ರಾಂತ್ಯವನ್ನು ಮಾತ್ರ ಅರಮನೆ ಸೀಮೆ ಎನ್ನುವ ಕೊಡಗಿಗೆ ಸೇರಿಸಿದರು. ಅಲ್ಲಿಯವರೆಗೆ ನಾವು ಐಗೂರು ಏಳು ಸಾವಿರ ಸೀಮೆಯಲ್ಲಿದ್ದೆವು. ಅಲ್ಲಿ ನಾವಿದ್ದ ಕುರುಹುಗಳು ಇಂದಿಗೂ ಸಹ ಇವೆ. ನಾವೆಲ್ಲಾ ಒಂದಾಗಿಯೇ ಇದ್ದವರು. ಅನಂತರ ಹೊರಗಿನ ಸಂಪರ್ಕದಿಂದ ನಮ್ಮ ಭಾಷೆಗಳೂ ಬದಲಾಗಿ ಬಿಟ್ಟವು.

ಸಂಗಾತಿ : ಅಂದರೆ ನಮ್ಮ ಮೂಲ ಭಾಷೆ ಗೌಡಕನ್ನಡವಲ್ಲವೇ ?

ಉ : ಹೌದು, ನಮ್ಮ ಜನಾಂಗದವರು ಬ್ರಿಟೀಷರ ವಿರುದ್ಧ ಹೋರಾಡಿದ್ದರಿಂದ ನಾವು ಬ್ರಿಟೀಷರಿಂದ ಗುರುತಿಸಲ್ಪಟ್ಟು ಹಾಗೂ ಅವರ ಅವ ಕೃಪೆಗೆ ಒಳಗಾದ ಪರಿಣಾಮವಾಗಿ ನಮ್ಮನ್ನು ಬೇರೆಯವರೊಡನೆ ಸಂಪರ್ಕಿಸದಂತೆ ನಿರ್ಬಂಧಿಸಿದ್ದರು. ಆದರ ಪರಿಣಾಮವಾಗಿ ನಮ್ಮ ಅರೆಭಾಷೆ [ಗೌಡಗನ್ನಡ] ನಮ್ಮಲ್ಲಿ ಅಮರವಾಗಿ ಉಳಿಯಲು ಸಾಧ್ಯವಾಯಿತು.

ಕುಂಬುಗೌಡನ ಮನೆ ದಿ|| ಮುದ್ದಪ್ಪನವರ ಮಗಳು ಇಂದಿರಾರವರೊಡನೆ ದಾಂಪತ್ಯ ಜೀವನ ನಡೆಸುತ್ತಿರುವ ದೇವಿ ಪ್ರಸಾದ್‌ರವರಿಗೆ ಮೂವರು ಮಕ್ಕಳು. ಹಿರಿಯ ಮಗಳು **MBA** ಪದವಿ ಪಡೆದು ವಿವಾಹವಾಗಿ **U.S.A**. ಯಲ್ಲಿ ವಾಸ್ತವ್ಯ ಹೂಡಿದರೆ, ಕಿರಿಯ ಮಗಳು ಪ್ರಾಜ್ಞಾ ಎಂ. ಎ. ಇಂಗ್ಲೀಷ್ ಲಿಟರೇಚರ್‌ನಲ್ಲಿ ದ್ವಿತೀಯ ರ‍್ಯಾಂಕ್ ಗಳಿಸಿದವರು. ಒಬ್ಬನೇ ಮಗ ದೇವಿಚರಣ್ ಪಿ. ಯು. ಸಿ. ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಅಗರ್ಭ ಶ್ರೀಮಂತಿಕೆ ಇವರಲ್ಲಿದ್ದರೂ ಸಹ ಶ್ರೀಮಂತಿಕೆಯ ಆಹಂ ಇವರಲ್ಲಾಗಲಿ, ಇವರ ಕುಟುಂಬದ ಸದಸ್ಯರಲ್ಲಾಗಲಿ ಕಾಣಸಿಗದು. ಸರಳ ಸೌಮ್ಯ ಸ್ವಭಾವದ ದೇವಿ ಪ್ರಸಾದ್‌ರವರ ನಿಲುವಿನಲ್ಲಿ ಎಲ್ಲಾ ಗೌಡ ಜನಾಂಗವನ್ನು ಸಂಘಟಿಸುವ, ಐಕ್ಯತೆ ಸಾಧಿಸುವ ಮತ್ತು ಎಲ್ಲಾ ಜನಾಂಗದ ನಡುವೆಯೂ ಸಾಮರಸ್ಯ ಕಾಪಾಡುವ ಭರವಸೆಯಿದೆ. ದೇವಿಪ್ರಸಾದ್‌ರಂತಹ ಸಮಾಜ ಸೇವಾ ಮನೋಭಾವದ ವ್ಯಕ್ತಿಗಳು ನಮ್ಮಲ್ಲಿ ಹೆಚ್ಚು ಹೆಚ್ಚು ಉದಯಿಸಲೆಂಬುದೇ ನಮ್ಮ "ಕೊಡಗು–ಸಂಗಾತಿ"ಯ ಆಶಯವಾಗಿದೆ.

## ಗಾದೆಗಳು

1. ಅಂಗ ಇಲ್ಲದವರಿಗೆ ಮಂಗನ ಚೇಷ್ಟೆ.
2. ಅಲ್ಪ ವಿದ್ಯೆ ಕಲ್ತವರಿಗೆ ಮಹಾ ಗರ್ವ.
3. ಅಲ್ಪರ ಸಂಘ ಅಭಿಮಾನ ಭಂಗ.
4. ದುಡ್ಡು ಇದ್ದವ ದೊಡ್ಡಪ್ಪ.
5. ಕಷ್ಟಕ್ಕೆ ಆದವ ನೆಂಟ.

**ಕುಞಳಿಯನ ಬಿ. ತಮ್ಮಯ್ಯ**

**ಚೇರಂಬಾಣೆ.**

# ಗೌಡರ ವಿವಾಹ ಪದ್ಧತಿ

[ಹಿಂದಿನ ಸಂಚಿಕೆಯಿಂದ]

**ವಿವಾಹಕ್ಕೆ ಹೇಳುವ ಕ್ರಮ :**

ಹಿಂದಿನ ಕಾಲದಲ್ಲಿ ವಿವಾಹ ತೆಗೆಯುವ ಮನೆಯವರು ಎಲೆ ಅಡಿಕೆಯನ್ನು ಕೈ ಚೀಲದಲ್ಲಿ ತುಂಬಿಕೊಂಡು ಮನೆ ಮನೆಗೂ ಹೋಗಿ ವೀಳ್ಯ ಕೊಟ್ಟು ವಿವಾಹಕ್ಕೆ ಆಮಂತ್ರಿಸುತ್ತಿದ್ದರು. ಈಗ ಮುಂದುವರಿದ ನವೀನ ರೀತಿಯಲ್ಲಿ ಆಮಂತ್ರಣ ಪತ್ರಿಕೆಗಳನ್ನು ಅಚ್ಚು ಹಾಕಿಸಿ ಹಂಚುವ ವಾಡಿಕೆಯಾಗಿದೆ. ಕುಟುಂಬದವರಿಗೆ, ಸೋದರನೂವನಿಗೆ, ಊರು ಗೌಡರಿಗೆ ಮುಖ್ಯಸ್ಥರಿಗೆ ಹಾಗೂ ಜನಾಂಗದ ಇತರ ಹಿರಿಯರಿಗೆ ಪತ್ರಿಕೆಯೊಂದಿಗೆ, ವೀಳ್ಯವನ್ನು ತಟ್ಟೆಯಲ್ಲಿಟ್ಟು ಪಾದ ಮುಟ್ಟಿ ನಮಸ್ಕಾರ ಮಾಡಿ ವಿವಾಹಕ್ಕೆ ಸರ್ವರೂ ಬರಬೇಕು ಮತ್ತು ವಿವಾಹ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಡಬೇಕು ಎಂದು ಈಗಲೂ ಹೇಳುವ ಕ್ರಮವಿದೆ.

**ಸಂಚಿಕಾರ ಕೊಡುವುದು :**

ಮದುವೆಗೆ ಸಮಯದಲ್ಲಿ ಓಲಗ ಮಾಡುವವರಿಗೆ [ವಾದ್ಯ] ಮದುವೆಯ ದಿನವನ್ನು ತಿಳಿಸಿ 5 ವೀಳ್ಯದೆಲೆ, 5 ಅಡಿಕೆಯೊಂದಿಗೆ ಮುದ್ರಿತ ಪತ್ರಿಕೆಯನ್ನು ಕೊಟ್ಟು ಕೊಂಬು ಕಹಳೆಯ ಸಮೇತ ಚಪ್ಪರದ ದಿನವೇ ಬರುವುದಕ್ಕೆ ಹೇಳುವುದು. ಅಂತೆಯೇ ಮಡಿವಾಳನಿಗೆ ಮೇಲ್ಕಟ್ಟು ಕಟ್ಟುವುದಕ್ಕೆ, ಮಡಿಹಾಸುವುದಕ್ಕೆ ಮತ್ತು ಇತರ ಕೆಲಸ ಕಾರ್ಯಗಳಿಗೆ ಹಾಗೂ ಗಂಡಿನ ಕಡೆಯವರಾದರೆ ಕ್ಷೌರಿಕನಿಗೂ ವರನ ಮುಖ ಕ್ಷೌರ ಮಾಡುವುದಕ್ಕೆ ಕೂಡ ಎಲೆ ಅಡಿಕೆಯೊಂದಿಗೆ ಮುದ್ರಿತ ವಿವಾಹ ಆಮಂತ್ರಣವನ್ನು ಕೊಡಬೇಕು. ಇದಕ್ಕೆ ಸಂಚಿಕಾರ ಕೊಡುವುದು ಎಂದು ಹೇಳುವರು. ಈ ಸಮಯದಲ್ಲಿ ಅವರವರ ವೆಚ್ಚಗಳ ಬಗ್ಗೆ ಮಾತನಾಡಿಕೊಳ್ಳುವುದು.

**ಚಪ್ಪರ ಹಾಕುವುದು ಮತ್ತು ಸಮಾರಂಭ :**

ಮದುವೆ ಚಪ್ಪರ ಹಾಕುವುದಕ್ಕೆ 4–5 ದಿನಗಳಿಗೆ ಮುಂಚಿತವಾಗಿ ಕುಟುಂಬಸ್ಥರಿಗೆ, ನೆರೆಕರೆಯವರಿಗೆ ತಿಳಿಸುವುದು. ಅವರು ಕೂಡ ಚಪ್ಪರ ಹಾಕುವುದಕ್ಕೆ ಸಹಕರಿಸುವುದು. ಮನೆಯ ಮುಂಭಾಗದ ಚಪ್ಪರವು 12 ಕಂಬಗಳಿಂದ ಪ್ರತ್ಯೇಕವಾಗಿರತಕ್ಕದ್ದು. ಮನೆಯ ಮೆಟ್ಟಲಿಗೆ ನೇರವಿರುವ ಮಧ್ಯದ 4 ಕಂಬಗಳಿಂದ ಪ್ರತ್ಯೇಕವಾಗಿರತಕ್ಕದ್ದು. ಮೆಟ್ಟಲಿಗೆ ನೇರವಿರುವ ಮಧ್ಯದ 4 ಕಂಬಗಳಲ್ಲಿ ಬಲಭಾಗದ ಒಂದು ಕಂಬವನ್ನು ಹಾಲೆ ಬರುವ ಕಂಬ [ಹಾಲು ಬರುವ ಪಲವೃಕ್ಷದ ಕಂಬ] ಹಾಕುವುದಕ್ಕಾಗಿ ಬಿಡುವುದು. ದಿಬ್ಬಣ ಬಂದು ನಿಲ್ಲುವ ಚಪ್ಪರದ ಎದುರಿನ ಕಂಬಗಳಿಗೆ ಮತ್ತು ಆರತಿ ಮಾಡುವ ಮೊದಲ ಎರಡು ಕಂಬಗಳಿಗೆ ಗೊನೆಯಿರುವ ಎರಡು ಬಾಳೆಗಳನ್ನು ಕಟ್ಟಿ ಸೊಪ್ಪು ಹಾಕಿ ಮಾವಿನ ತೋರಣ ಕಟ್ಟುವುದು. ಉಳಿದ ಒಂದು ಹಾಲು ಬರುವ ಕಂಬವನ್ನು ಚಪ್ಪರ ಸಮಾರಂಭಕ್ಕೆ, ಸಂಜೆ ಸೇರುವ ಊರಿನವರು [ಊರು ಕೂಡುವ ಸಮಯದಲ್ಲಿ] ಹಾಕುವರು. ಈ ಹಾಲು ಬರುವ ಕಂಬವು ಮನೆಯ ಮೆಟ್ಟಲು ಇಳಿಯುವಾಗ ಬಲಭಾಗಕ್ಕೆ ನಡುವಿನ ಕಂಬವಾಗಿರಬೇಕು. ಇದು ಚಪ್ಪರದ 12 ಕಂಬಗಳ ಪೈಕಿ ನಡುವಿನಲ್ಲಿದ್ದು ಇದನ್ನು ಗಣಪತಿಯ ಸಂಕೇತವೆಂದು ಹಾಲು ಬರುವ ಕಂಬವಾಗಿಯೂ, ನಡುವಿನಲ್ಲಿ ಇನ್ನುಳಿದ ಮೂರು ಕಂಬಗಳು ತ್ರಿಮೂರ್ತಿಗಳಾದ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರನ ಸಂಕೇತವಾಗಿಯೂ ಹಾಕುವರು. ಈ ನಾಲ್ಕು ಕಂಬಗಳ ಸುತ್ತಲೂ ಇರುವ ಎಂಟು ಕಂಬಗಳು ತ್ರಿಮೂರ್ತಿಗಳ ಅಷ್ಟ ದಿಕ್ಪಾಲಕರಾಗಿಯೂ ಇರುವುದು, ಎಂದು ಬಲ್ಲವರು ಹಿರಿಯರು ಹೇಳಿದುದಾಗಿದೆ. ಹಾಲೆ ಮರದ ಕಂಬಕ್ಕೆ ಬಾಳೆ ಗೊನೆ, ತೆಂಗಿನಕಾಯಿ ಮತ್ತು ಸರಮಾಲೆ ದೀಪವನ್ನು ತೂಗುವರು. ಉಳಿದ ಎಲ್ಲಾ ಕಂಬಗಳಿಗೆ ಚಿಕ್ಕ ಸೌತೆಕಾಯಿಗಳನ್ನು ಅಲಂಕಾರಕ್ಕಾಗಿ ಕಟ್ಟಿ ತೂಗುವರು.

**ಒಲೆ ಪೂಜೆ ಮಾಡುವುದು :**

ಸಮಾರಂಭಕ್ಕೆ ಅಡಿಗೆ ಮಾಡುವ ಸ್ಥಳವನ್ನು ಮೊದಲೇ ಸಿದ್ಧಪಡಿಸಿರುತ್ತಾರೆ. ಮುತ್ತೈದೆಯರುಸೇರಿ ಅಕ್ಕಿ, ತೆಂಗಿನಕಾಯಿ ಬಾಳೆಹಣ್ಣು, ಎಲೆ ಅಡಿಕೆ ದೀಪದೊಂದಿಗೆ ಅಲ್ಲಿಗೆ ಹೋಗಿ ಸ್ಥಳವನ್ನು ಶುದ್ಧಮಾಡಿ ನಂದಾದೀಪ ಹಚ್ಚಿ ಗಣಪತಿಗೆ ಇಟ್ಟು ಒಲೆಯನ್ನು ಅಡಿಗೆಗಾಗಿ ಬಿಟ್ಟು ಬರುವುದು.

**ಊರು ಪಂಕ್ತಿ ಕೊಡುವುದು :**

ಕುಟುಂಬದ ಮುಖ್ಯಸ್ಥ ಇಲ್ಲವೇ ಮನೆ ಯಜಮಾನ ಒಂದು ಪಚ್ಚೆಯಲ್ಲಿ ಹುದುರಿ, ತೆಂಗಿನ ಕಾಯಿ, ಬಾಳೆಹಣ್ಣು, ಎಲೆ, ಅಡಿಕೆ ಎಲ್ಲವನ್ನೂ ಇಟ್ಟು ಇಂದಿನಿಂದ ನಾಳೆಯ ತನಕ ಜರುಗುವ ವಿವಾಹ ಕಾರ್ಯವನ್ನು ಊರಿನವರು, ನೆಂಟರಿಷ್ಟರು, ನೆರೆಕರೆಯವರು ಎಲ್ಲರೂ ಸೇರಿ ಯಾವುದೊಂದು ಕುಂದು ಕೊರತೆ ಬಾರದಂತೆ ನೋಡಿಕೊಂಡು ವಿವಾಹ ಕಾರ್ಯವನ್ನು ಸಾಂಗವಾಗಿ ನೆರವೇರಿಸಿಕೊಡಬೇಕು ಎಂದು ಹೇಳಿ ಊರು ಗೌಡರ ಹಸ್ತ, ಮುಖ್ಯಸ್ಥರ ಹಸ್ತ ಪಚ್ಚೆಯನ್ನು ಕೊಟ್ಟು ಸರ್ವರೂ ಊರು ಪಂಕ್ತಿ ತೆಗೆದುಕೊಳ್ಳಬೇಕು ಎಂದು ನಮಸ್ಕಾರ ಮಾಡುವರು. ನಂತರ ಮದುವೆ ಜವಾಬ್ದಾರಿ ನೆಂಟರು ಮತ್ತು ಊರಿನವರ ಮೇಲೆ ಬಿದ್ದಂತಾಯಿತು. ಒಡನೆಯೇ ಊರು ಗೌಡರು, ಮುಖ್ಯಸ್ಥರು ಮಡಿವಾಳನನ್ನು ಕರೆದು ಅವನಿಗೆ ಕೊಡಬೇಕಾದ ಮರ್ಯಾದೆ

ಯನ್ನು ಕೊಟ್ಟು [ಇಲ್ಲಿ ಮಡಿವಾಳನಿಗೆ ಮರ್ಯಾದೆಯಾಗಿ ಎಲೆ, ಅಡಿಕೆ, ಒಂದು ತೆಂಗಿನಕಾಯಿ, 25 ಪೈಸೆ ಹಣ ಒಂದು ತಟ್ಟೆಯಲ್ಲಿ ಇಟ್ಟು ಕೊಡುವುದು ಅಂತೆಯೇ ಓಲಗದವರಿಗೂ ಗಂಡಿನ ಮನೆಯಾದರೆ ಕ್ಷೌರಿಕನಿಗೂ ಕೊಡಬೇಕು. ಮಡಿವಾಳ ನಿಗೆ ಮೇಲ್ಕಟ್ಟು ಕಟ್ಟುವುದಕ್ಕೂ ಓಲಗ ದವರಿಗೂ, ಮರ್ಯಾದೆ ಕೊಟ್ಟು ವಾದ್ಯ ಮಾಡುವುದಕ್ಕೆ ಅನುಮತಿಯನ್ನು ಕೊಡು ವರು.

**ಮೇಲ್ಕಟ್ಟು ಕಟ್ಟುವುದು :**

ತನ್ನ ಮರ್ಯಾದೆಯನ್ನು ತೆಗೆದು ಕೊಂಡು, ಮಡಿವಾಳನು ಹಾಲೆ ಮರದ ಕಂಬದ ಅಡಿಯಲ್ಲಿ ಮೊದಲು ಗಣಪತಿಗೆ ಇಟ್ಟು [ಮಣೆಯ ಮೇಲೆ ನಂದಾದೀಪ ಹಚ್ಚಿಟ್ಟು ಒಂದು ಕುಡಿಬಾಳೆ ಎಲೆಯ ಮೇಲೆ 5 ಕುಡ್ತೆ ಅಕ್ಕಿ ಹಾಕಿ ಅದರ ಮೇಲೆ ಒಂದು ತೆಂಗಿನ ಕಾಯಿಯನ್ನು ಇಟ್ಟು ಒಂದು ಬದಿಯಲ್ಲಿ ಎಲೆ ಅಡಿಕೆ ಮತ್ತು 25 ಪೈಸೆ ಇಟ್ಟು ಇನ್ನೊಂದು ಬದಿಯಲ್ಲಿ ಬಾಳೆಹಣ್ಣು ಇಟ್ಟು ಎದುರಿನಲ್ಲಿ ಒಂದೆರಡು ಹೂವು ಇಟ್ಟು ಊದುಕಡ್ಡಿ ಹಚ್ಚಿಟ್ಟು ನಂದಾದೀಪ ಹಚ್ಚಿ ಇಟ್ಟನಂತರ] ಮನೆ ಯಜಮಾನರಲ್ಲಿ ಊರು ಗೌಡರಲ್ಲಿ, ಮುಖ್ಯಸ್ಥರಲ್ಲಿ ಕೇಳಿ ಮನೆಯ ಪೂರ್ವದ ಮೆಟ್ಟಿಲಿನಿಂದ ಹಿಡಿದು ದಿಬ್ಬಣ ಬಂದು ನಿಲ್ಲುವ ಎದುರಿನ ಈ ಎಂಟು ಕಂಬಗಳ ಉದ್ದಕ್ಕೂ ಮೂರು ಮಡಿಯಾದ ಬಿಳಿ ಪಂಚೆಯನ್ನು ಚಪ್ಪರದ ಒಳಭಾಗದಲ್ಲಿ ಮೇಲೆ ಕಟ್ಟುವುದು. ಶಾಸ್ತ್ರದ ನಡುವಿನ ನಾಲ್ಕು ಕಂಬಗಳ ನಡುವಿನಲ್ಲಿ ಒಂದ್ರ ತೆಂಗಿನಕಾಯಿಯನ್ನು ಕಟ್ಟುವುದು. ಬಾಳೆ ಹಣ್ಣು, ಎಲೆ, ಅಡಿಕೆ ಸುತ್ತಲೂ ಕಟ್ಟುವುದು. ಮೂಲೆ ಮೂಲೆಗಳಿಗೆ ಮೊದಲು ಹೇಳಿದಂತೆ ಸೌತೆಕಾಯಿ, ಎಲೆ, ಅಡಿಕೆ, ಬೆಲೂನು, ಬಣ್ಣದ ಕಾಗದಗಳಿಂದ ಮಾಡಿದ ಕೃತಕ ಹೂ ಮಾಲೆಗಳನ್ನು ಕಟ್ಟಿ ಕಂಬಗಳಿಗೆ ಬಣ್ಣದ ಕಾಗದಗಳನ್ನು ಅಂಟಿಸಿ ಹನ್ನೆರಡು ಕಂಬಗಳುಳ್ಳ ಚಪ್ಪರವು ಎದ್ದು ಕಾಣುವಂತೆ ಅಲಂಕರಿಸುವುದು, ತೂಗು ದೀಪವನ್ನು ಹಾಲೆಕಂಬದ ಬದಿಯಲ್ಲಿ ಕಟ್ಟಿ ತೂಗುವುದು. ಮೇಲ್ಕಟ್ಟು ಕಟ್ಟುವ ಸಮಯದಲ್ಲಿ ಓಲಗದವರು ವಾದ್ಯ ಮಾಡು ತ್ತಿರಬೇಕು. ಮೇಲ್ಕಟ್ಟು ಕಟ್ಟಿದ ನಂತರ ಈ ಚಪ್ಪರವನ್ನು "ಸೀತಾವಳಿ ಚಪ್ಪರ" ವೆಂದು ಕರೆಯುವರು. ಆದುದರಿಂದ ಈ ಚಪ್ಪರದ ಶ್ರೇಷ್ಠತೆಯನ್ನು ಕಾಪಾಡಲು "ಇದರ ಅಡಿಯನ್ನು ಹಿಡಿ ಸೂಡಿನಿಂದ ಗುಡಿಸುವುದಾಗಲಿ, ಪಾದರಕ್ಷೆಯನ್ನು ಹಾಕುವುದಾಗಲಿ, ಅದರಡಿಯಲ್ಲಿ ಉಗುಳು ವುದಾಗಲಿ, ಅಮಂಗಳ ವಾಕ್ಯ ಹೇಳುವು ದಾಗಲಿ ನಿಷಿದ್ಧ". ಇದನ್ನು ಈಗಲೂ ಎಲ್ಲಾ ಕಡೆಗಳಲ್ಲಿ ಸರಿಯಾಗಿ ಪಾಲಿಸುತ್ತಾರೆ. ಮೊದಲು ಗಣಪತಿಗೆ ಇಟ್ಟ ಅಕ್ಕಿ, ತೆಂಗಿನ ಕಾಯಿ, ಬಾಳೆಹಣ್ಣು, ಹಣ, ಎಲೆ, ಅಡಿಕೆ ಮಡಿವಾಳನು ತೆಗೆದುಕೊಳ್ಳುವನು.

**ಚಪ್ಪರದ ಊಟ :**

ಒಕ್ಕಲೆಜಮಾನರು ಊಟಕ್ಕೆ ತಯಾರಿ ಆದ ನಂತರ ಒಂದು ಚೆಂಬಿನಲ್ಲಿ ನೀರು ಹಿಡಿದು ಸರ್ವರನ್ನು ಊಟಕ್ಕೆ ಏಳಬೇಕು ಎಂದು ಆಹ್ವಾನಿಸುತ್ತಾರೆ. ವಧು–ವರನು ಸಹ ಊಟ ಮಾಡಿಕೊಳ್ಳುವುದು.

**ಕಾಸ್ತಾಳಿ ಕಟ್ಟುವುದು :**

ಊಟ ಮುಗಿದ ನಂತರ ಸೋದರ ಮಾವನಿಗೆ ಕಾಸ್ತಾಳಿ ಕಟ್ಟುವುದಕ್ಕೆ ನೀರು ಕೊಡುವುದು. [ಇದಕ್ಕೆ ಕೆಲವು ಕಡೆ ಮುಹೂರ್ತ ಮಣಿ ಎಂದು ಹೇಳುವರು]. ವರನು ಬಿಳಿ ಪಂಚೆಯನ್ನುಟ್ಟು ಮೇಲ್ಮೈಗೆ ಅಂಗಿ ಹಾಕದೆ ತಲೆಯ ಮೇಲೆ ವಸ್ತ್ರ ಹಾಕಿಕೊಂಡು ನೆಲ್ಲಕ್ಕಿ ಅಡಿಯಲ್ಲಿ ನಿಲ್ಲ ಬೇಕು. ವಧುವೂ ಕೂಡ ಸಾಮಾನ್ಯ ಉಡುಪಿನಲ್ಲಿ ತಲೆಗೆ' ವಸ್ತ್ರ ಹಾಕಿ ನೆಲ್ಲಕ್ಕಿ ಅಡಿಯಲ್ಲಿ ನಿಂತಿರಬೇಕು. ಆಗ ಊರು ಗೌಡರು, ಮುಖ್ಯಸ್ಥರು ಮೊತ್ತ ಮೊದಲಿಗೆ "ಹತ್ತು ಕುಟುಂಬ ಹದಿನೆಂಟು ಗೋತ್ರ ಸಂಸಾರ ಸಂಗಡ ಕೇಳಿ ಕುಲಸ್ಥರ ಸಭೆಯಲ್ಲಿ ಸಮಸ್ತರ ಸಂಗಡ ಕೇಳಿ ಸೋದರ ಮಾವ ವರನಿಗೆ, ವಧುವಿಗೆ ಕಾಸ್ತಾಳಿ ಕಟ್ಟುವಂತೇ" ಎಂದು ಮೂರು ಬಾರಿ ಗಟ್ಟಿಯಾಗಿ ಹೇಳು ತ್ತಿದ್ದಂತೆ ಸೋದರ ಮಾವ ಕಾಸ್ತಾಳಿ ಕಟ್ಟು ವರು. ಆಗ ಸರ್ವರೂ ಒಳ್ಳೆಯ ಕಾರ್ಯ ವಂತವೇ ಎಂದು ಹೇಳುವುದು. ವರ, ವಧುವು ಮೊದಲು ನೆಲ್ಲಕ್ಕಿ ದೀಪಕ್ಕೆ ಅಕ್ಕಿ ಹಾಕಿ ನಂತರ ಮನೆಯ ಅಟ್ಟಕ್ಕೆ ಅಕ್ಕಿ ಹಾಕಿ [ಅಟ್ಟದ ಮೇಲೆ ಮುಡಿಪು ಇರುವ ಕಾರಣ] ಸೋದರ ಮಾವನ, ತಂದೆ ತಾಯಿಯ, ಊರು ಗೌಡರ, ಮುಖ್ಯಸ್ಥರ ಮತ್ತು ಹಿರಿಯರ ಪಾದ ಮುಟ್ಟಿ ನಮ ಸ್ಕಾರ ಮಾಡಿ ಆಶೀರ್ವಾದ ಬೇಡುವುದು. ಕಾಸ್ತಾಳಿ ಕಟ್ಟುವುದಕ್ಕೆ ಮೊದಲೇ ವರನು, ವಧುವು ತನ್ನ ಸೋದರ ಭಾವ, ಅತ್ತಿಗೆ ಇವರಿಗೆ ವೀಳ್ಯ ಕೊಟ್ಟು ಅಡೋಳಿಯಾಗಿ ನಿಲ್ಲಲು ಕೇಳಿಕೊಳ್ಳುವುದು. ಅಕ್ಕ ಅಥವಾ ತಂಗಿಗೂ ಕೂಡ ಕಂಚಿಮಿಯಾಗಿ ನಿಲ್ಲಲು ವೀಳ್ಯ ಕೊಟ್ಟು ಕೇಳಿಕೊಳ್ಳುವುದು. ಸೋದರ ಇಲ್ಲವೇ ಅಕ್ಕ ತಂಗಿಯರು ಇಲ್ಲ ದವರು ಹತ್ತಿರದ ಸಂಬಂಧಿಕರನ್ನು ಕೇಳಿ ಕೊಳ್ಳುವುದು. ನಂತರ ವರನ, ವಧುವಿನ ಎಲ್ಲಾ ವಿಚಾರಗಳಲ್ಲಿ ಅವರಿಬ್ಬರೂ ಎಚ್ಚರ ವಹಿಸುವುದಾಗಿದೆ.

[ಮುಂದಿನ ಸಂಚಿಕೆ ನೋಡಿ]

## ಹಾಂಗ್‌ಕಾಂಗ್‌ನಲ್ಲಿ ಭಾರತೀಯನ ಬವಣೆ

[ಹಿಂದಿನ ಸಂಚಿಕೆಯಿಂದ]

ಹಾಗೆಯೇ ಹಾಂಗ್‌ಕಾಂಗ್‌ನಲ್ಲಿ ನೆಲೆಸಿರುವ ಭಾರತೀಯರು ಎಷ್ಟೇ ಶ್ರೀಮಂತಿಕೆ ಇದ್ದರೂ ಕೂಡ ಅಲ್ಲಿ ನೆಲೆಸಿರುವ ಪ್ರಮುಖ ಜನಾಂಗವಾದ ಚೀನಿಯರಿಂದ [ಶೇಕಡ 98 ರಷ್ಟು] ಒಂದಲ್ಲ ಒಂದು ತೊಂದರೆಯನ್ನು ಅನುಭವಿಸುತ್ತಿದ್ದಾರೆ. ವಿಶೇಷವಾಗಿ ಅಲ್ಲಿ ಯುವ ಚೀನಿಯರು, ಭಾರತೀಯರನ್ನು ಹಿಂಸಿಸುತ್ತಿದ್ದುದು ಸರ್ವೇ ಸಾಮಾನ್ಯ. ಬ್ರಿಟೀಷರ ಆಡಳಿತಕ್ಕೆ ಒಳಪಟ್ಟಿದ್ದ ಹಾಂಗ್‌ಕಾಂಗ್‌ನಲ್ಲಿ ಚೀನಿಯರಿಂದ ತೊಂದರೆಗೆ ಒಳಗಾದಾಗ, ಚೀನಿಯ ಆಡಳಿತದ ಹಾಂಗ್‌ಕಾಂಗ್‌ನಲ್ಲಿ ಚೀನಿಯರ ದಬ್ಬಾಳಿಕೆಗೆ ಒಳಗಾಗುವುದರಲ್ಲಿ ಸಂದೇಹವಿಲ್ಲ. ಇನ್ನೊಂದು ನಿದರ್ಶನ ನೀಡುವುದಾದರೆ, ಭಾರತೀಯರು ತಾವು ಸಂಪಾದಿಸಿದ ಅಮೂಲ್ಯ ವಸ್ತುಗಳನ್ನು ದೇಶದಿಂದ ತೆಗೆದುಕೊಂಡು ಹೊರ ಹೋಗಬಹುದೆಂಬ ನಿರೀಕ್ಷೆಯಲ್ಲಿ ಚೀನ [ಹಾಂಗ್‌ಕಾಂಗ್] ಅಂತಹ ವಸ್ತುಗಳನ್ನು ದೇಶದಿಂದ ಹೊರತೆಗೆದುಕೊಂಡು ಹೋಗದಂತೆ ಮತ್ತು ಯಾವುದೇ ಪ್ರದರ್ಶನಗಳನ್ನು ನಡೆಸದಂತೆ ನಿರ್ಬಂಧ ಹೇರಿದೆ. ಇದರಿಂದ ಶ್ರೀಮಂತ ಮತ್ತು ಮಧ್ಯಮ ವರ್ಗದ ಭಾರತೀಯರು ಅದರಲ್ಲೂ ಮಹಿಳೆಯರು ದಿಗ್ಭ್ರಮೆಗೊಂಡಿದ್ದಾರೆ.

ಇಷ್ಟೆಲ್ಲ ಸಮಸ್ಯೆಗಳಿದ್ದರೂ, ಅಲ್ಲಿನ ಕೆಲವು ಭಾರತೀಯರು ಆಶಾಭಾವನೆಯಿಂದ ಇದ್ದಾರೆ. [ಕೆಲವು ಪತ್ರಿಕೆ ವರದಿಯ ಪ್ರಕಾರ] ಕೆಲವು ವ್ಯಾಪಾರಸ್ಥರ ಪ್ರಕಾರ ಭಾರತೀಯರಿಲ್ಲದೆ ಹಾಂಗ್‌ಕಾಂಗ್ [ಚೀನ] ಸ್ವತಂತ್ರವಾಗಿ ವ್ಯಾಪಾರ ನಡೆಸಲಾರದು. ಕಾರಣ ಅಲ್ಲಿನ ಹೆಚ್ಚಿನ ರಫ್ತು ವ್ಯಾಪಾರ ಸಾಲದ ರೂಪದಲ್ಲಿ ಕೊಲ್ಲಿ ರಾಷ್ಟ್ರಗಳು ಮತ್ತು ಆಫ್ರಿಕದ ರಾಷ್ಟ್ರಗಳ ಭಾರತೀಯ ವ್ಯಾಪಾರಸ್ಥರೊಂದಿಗೆ ನಡೆಯುತ್ತಿದೆ. ಭಾರತೀಯ ವ್ಯಾಪಾರಸ್ಥರಿಗೆ ಕುಲಸಂಬಂಧಿ ಸಂಬಂಧಗಳಿರುವುದರಿಂದ ವ್ಯಾಪಾರದಲ್ಲಿ ಹಿಡಿತ ಜಾಸ್ತಿ ಎಂಬ ನಂಬಿಕೆ. ಇನ್ನು ಕೆಲವರು ಹಾಂಗ್‌ಕಾಂಗ್ ಚೀನದೊಂದಿಗೆ ವಿಲೀನ ಹೊಂದಿರುವುದರಿಂದ ತಮ್ಮ ವ್ಯಾಪಾರ ವೈವಾಟನ್ನು ಇನ್ನೂ ವಿಸ್ತಾರವಾಗಿ ಚೀನದಾದ್ಯಂತ ವಿಸ್ತರಿಸುವ ಆಸೆಯನ್ನು ಕೂಡ ಹೊಂದಿದ್ದಾರೆ.

ಏನೇ ಇದ್ದರು ಸಾಕಷ್ಟು ಮಾನವ ಸಂಪನ್ಮೂಲ ಹೊಂದಿರುವ ಚೀನದಲ್ಲಿ ಭಾರತೀಯರ ಅವಶ್ಯಕತೆ ಇಲ್ಲವೆಂದೇ ಹೇಳಬೇಕಾಗುತ್ತದೆ. ಹಾಗೆಯೇ ಚೀನರ ಸಮತವಾದ ನೀತಿ (Communist Policy) ಮತ್ತು ಅಲ್ಲಿನ ಸಮಾಜಶಾಹಿ ಆರ್ಥಿಕ ಪದ್ಧತಿ (Socialistic Economic System) ವಿದೇಶಿ ಬಂಡವಾಳದಾರರಿಗೆ ಅವಕಾಶ ನೀಡಲಾರರು. ಹೀಗಾಗಿ ಭಾರತ ಸ್ವತಂತ್ರ್ಯ ಗಳಿಸಿದ 50ನೇ ವರುಷದಲ್ಲಿ ಕೂಡ ಪುನಃ ಒಂದು ನಿರಾಶ್ರಿತರ ಸಮಸ್ಯೆಯನ್ನು ಎದುರಿಸುವುದರಲ್ಲಿ ಸಂದೇಹವಿಲ್ಲ. ಇತಿಹಾಸದ ಪುಟಗಳನ್ನು ತಿರುವಿದರೆ, ಬೇರೆ ದೇಶದಲ್ಲಿ ನೆಲೆಸಿದ ಭಾರತೀಯರು ಆದೇಶಗಳು ಸ್ವತಂತ್ರ್ಯ ಹೊಂದಿದಾಗ ಅಥವಾ ಸರಕಾರ ಬದಲಾದಾಗ ತೊಂದರೆಗೆ ಒಳಗಾದುದೆ ಹೆಚ್ಚು.

● ಕುಯ್ಯಮುಡಿ ಜಿ. ಅಶ್ವಿನಿಕುಮಾರ್
ಎಂ.ಎ.,

## ವಿದ್ಯಾವಂತರ ಲಕ್ಷಣಗಳು

ಮುಂಜಾನೆ ಎದ್ದು ಮುಖವ ತೊಳೆದು
ಪುಸ್ತಕ ಹಿಡಿಯುವೆನು.
ಶಾಲೆಯ ಗುರುಗಳು ಹೇಳಿದ ಪಾಠವ
ಕಲಿತುಕೊಳ್ಳುವೆನು.
ಗುರುಗಳು ಕೇಳಿದ ಪ್ರಶ್ನೆಗಳಿಗೆ ಉತ್ತರ
ಹೇಳುವೆನು.
ಗೆಳೆಯರ ಜೊತೆಯಲ್ಲಿ ಹಾಡಿ ಕುಣಿದು
ಸಮಯವ ಕಳೆಯುವೆನು.
ಅಪ್ಪ ಅಮ್ಮ ಹೇಳಿದ ಕೆಲಸವನ್ನು
ತಕ್ಷಣ ಮಾಡುವೆನು.
ಅಕ್ಕ ಅಣ್ಣನ ಜೊತೆಯಲಿ ಸೇರಿ
ನಕ್ಕು ನಲಿಯುವೆನು.
ಪರೀಕ್ಷೆಗೆ ಕುಳಿತು ಬರೆದರೆ ನಾನು
ಫಸ್ಟ್ ಕ್ಲಾಸ್ ಬರುವೆನು.
ವರ್ಷದ ಕೊನೆಯಲಿ ಪಾಸ್ ಎಂದು
ನಾನು ಮೆರೆಯುವೆನು.

● ಕಾಕೇರ ರಾಜ ನಳಿನಿ ಮಡಿಕೇರಿ.

## ಅತೀ ಶ್ರೀಮಂತ ಭಾರತೀಯ

ಭಾರತೀಯ ಉದ್ಯಮಪತಿಗಳ ಕುಟುಂಬಗಳಲ್ಲಿ ಅತಿ ಪ್ರತಿಷ್ಠಿತ ಹೆಸರಾದ ಬಿರ್ಲಾ ಮನೆತನ ಆಸ್ತಿ–ಪಾಸ್ತಿ ಹಂಚಿಕೆ ಉದ್ಯಮಗಳ ವಿಂಗಡಣೆಯಿಂದಾಗಿ ಹೋಳು ಹೋಳಾಗಿದೆ. ಹಲವು ಬಿರ್ಲಾಗಳ ಗುಂಪುಗಳು ಈಗ ಅಸ್ತಿತ್ವದಲ್ಲಿವೆ. ಅವುಗಳಲ್ಲಿ ಆದಿತ್ಯ ಬಿರ್ಲಾ ಗುಂಪು ದೊಡ್ಡದು. ಆದಿತ್ಯ ಬಿರ್ಲಾ ತೀರಿಕೊಂಡ ನಂತರ ಅವರ ಏಕಮಾತ್ರ ಪುತ್ರ ಕುಮಾರ ಮಂಗಳಂ ಬಿರ್ಲಾ ಕುಟುಂಬದ ಪ್ರಮುಖ. ಅಮೇರಿಕದ ಫೋರ್ಬ್ಸ್ ಸಂಸ್ಥೆ ಪ್ರತಿ ವರ್ಷ ಪ್ರಕಟಿಸುವ ಜಗತ್ತಿನ ಅತಿ ಶ್ರೀಮಂತರ ಪಟ್ಟಿಯಲ್ಲಿ ಕುಮಾರಮಂಗಳಂ ಬಿರ್ಲಾ ಸತತವಾಗಿ ಎರಡನೇ ಬಾರಿ ಕಾಣಿಸಿಕೊಂಡಿದ್ದಾರೆ. [ಅನಿವಾಸಿ ಭಾರತೀಯರು ಸೇರಿದಂತೆ] ಮುಂಬಯಿ ಮಹಾನಗರದಲ್ಲಿ ಆದಿಗೋದ್ರೆಜ್‌ಗೆ ಸೇರಿದ ಮೂರು ಸಾವಿರ ಎಕರೆ ಭೂಮಿ ಇದೆಯಂತೆ.

## ನಾಟಿ ಮಾಡಲು ಯಂತ್ರ

ಬತ್ತದ ಸಸಿಯನ್ನು ಕೈಯಿಂದ ನಾಟಿ ಮಾಡುವುದಾದಲ್ಲಿ ಹೆಚ್ಚಿನ ಜನ ಕೆಲಸ ಮಾಡುವವರು ಬೇಕು. ಕೆಲವು ವೇಳೆ ನಾಟಿ ಮಾಡಲು ಜನಗಳು ಸಿಕ್ಕುವುದಿಲ್ಲ. ಆದರೆ ಈ ಎಂಇಎಕ್ಸ್–6 ಸಾಲಿನ ಬತ್ತ ನಾಟಿ ಮಾಡುವ ಉಪಕರಣ ಬಳಸುವುದರಿಂದ ಕೇವಲ ಇಬ್ಬರು ವ್ಯಕ್ತಿಗಳು ಕೆಲಸವನ್ನು ಮಾಡಬಹುದು.

ಶಿವಮೊಗ್ಗ ಜಿಲ್ಲಾ ಕೃಷಿ ನಿರ್ದೇಶಕ ಆರ್. ಬಿ. ಗೊಲ್ಲರ್ ಅವರು ಇತ್ತೀಚೆಗೆ ಭದ್ರಾವತಿ ತಾಲ್ಲೂಕು ಹಳ್ಳಿಕೆರೆ ಬೀಜೋತ್ಪಾದನಾ ಕೇಂದ್ರದಲ್ಲಿ ಎಂಇಎಕ್ಸ್–6 ಉಪಯೋಗಿಸಿ ಬೆಳೆಯಲಾದ ಫಸಲಿನ ಕ್ಷೇತ್ರಗಳನ್ನು ಪತ್ರಕರ್ತರಿಗೆ ಪರಿಚಯ ಮಾಡಿಸಿದರು.

ಈ ಭತ್ತ ನಾಟಿ ಮಾಡುವ ಉಪಕರಣ ಫಿಲಿಪ್ಪೀನ್ಸ್ ವಿನ್ಯಾಸದಾಗಿದ್ದು, ಇದನ್ನು ಅಲ್ಲಿರುವ ಅಂತರರಾಷ್ಟ್ರೀಯ ಅಕ್ಕಿ ಸಂಶೋಧನಾ ಕೇಂದ್ರದಲ್ಲಿ ನಿರ್ಮಿಸಿ, ಪರೀಕ್ಷಿಸಿ ರೈತರ ಉಪಯೋಗಕ್ಕೆ ಬಿಡುಗಡೆ ಮಾಡಲಾಗಿದೆ.

ಒಳ್ಳೆ ಗುಣಮಟ್ಟದ ಕಬ್ಬಿಣ ಮತ್ತು ಮರಮಟ್ಟುಗಳಿಂದ ಹಗುರವಾಗಿ ತಯಾರಿಸಲ್ಪಟ್ಟ ಈ ಉಪಕರಣದ ತೂಕ 20 ಕೆಜಿ ಇದ್ದು, ಉದ್ದ 85 ಸೆಂ.ಮೀ. ಇದೆ. ಇದರ ಪೈರು ನಾಟಿನ ಆಳದ ಸಾಮರ್ಥ್ಯ 2–4 ಸೆಂ.ಮೀ. ಇದ್ದು, ಈ ಉಪಕರಣದಲ್ಲಿ ಅಳವಡಿಸಿರುವ ಜೋಡಣೆಗಳಿಂದ ಶೀಘ್ರ ಚಾಲನೆ ಮತ್ತು ಸುಲಭ ನಿರ್ವಹಣೆ ಮಾಡಬಹುದು. ಈ ಉಪಕರಣವನ್ನು ಒಬ್ಬ ಅಥವಾ ಇಬ್ಬರು ಆಳುಗಳಿಂದ ಸುಲಭವಾಗಿ ಸಾಗಣಿಕೆ ಮಾಡಬಹುದು.

ಈ ಉಪಕರಣದ ಉಪಯುಕ್ತತೆ ಬಹುತೇಕ ಗದ್ದೆಯ ಹದ, ಸಮಾನತೆ ಮತ್ತು ನೀರಿನ ಪ್ರಮಾಣವನ್ನು ಅವಲಂಬಿಸುತ್ತದೆ. ಆದಕಾರಣ ಗದ್ದೆಯನ್ನು ನಿಗಾ ವಹಿಸಿ ಶ್ರದ್ಧೆಯಿಂದ ತಯಾರಿಸಬೇಕಾಗುತ್ತದೆ. ಕೃಷಿ ಇಲಾಖೆಯಲ್ಲಿ ಇಂತಹ ಒಂಬತ್ತು ಉಪಕರಣಗಳಿದ್ದು, ಅದರಲ್ಲಿ ಐದು ಉಪಕರಣಗಳನ್ನು ರೈತರಿಗೆ ಸಬ್ಸಿಡಿ ದರದಲ್ಲಿ ನೀಡಲಾಗಿದೆ. ಇದರ ಮೌಲ್ಯ 5,200 ರೂ. ಆಗುತ್ತದೆ. ಇದರಲ್ಲಿ ರೈತರಿಗೆ ಒಂದು ಸಾವಿರ ರೂಪಾಯಿ ಸಹಾಯಧನ ನೀಡಲಾಗುವುದು. ಅಪೇಕ್ಷೆ ಪಟ್ಟ ರೈತರಿಗೆ ಈ ಉಪಕರಣ ಬಳಸುವ ಬಗ್ಗೆ 2 ಅಥವಾ 3 ದಿನಗಳ ತರಬೇತಿ ನೀಡಲಾಗುತ್ತದೆ ಎಂದು ಅವರು ಹೇಳಿದರು.

[ಆಧಾರ]

## ಕೊಡಗು ಸಂಗಾತಿ

ನಮ್ಮ ಬೆಡಗಿನ ನಾಡು ಕೊಡಗಿನ
ಸಂಗಾತಿ ನಾನು ನಿನ್ನನು ।
ಕೈ ಬೀಸಿ ಕರೆಯುತ ಬರುವೆ ಜತೆಗೆ
ನುರೆಯದಿರು ನಿನ್ನನು ॥

ಏಳಿ ಬಂಧುಗಳೆದ್ದೇಳಿ ನೀವ್ಗಳು
ನೋಡಿ ಕೊಡಗು ಸಂಗಾತಿಯ ।
ನಮ್ಮ ಜನತೆಯ ಒಂದುಗೂಡಿಸಿ
ತೊರೆದು ನಿಲ್ಲಿಸಿ ಭೀತಿಯ ॥

ಮಾಡಿ ನೀವ್ ಮನ್ನಣೆಯ ಶಿಶು ಇದು
ನೋಡಿ ಪೋಷಿಶಿ ಕೂಸನು ।
ಬೆಳೆದು ತಲೆಯನು ಎತ್ತಿ ನಡೆಯಲಿ
ಧರೆಯ ಒಳಗಡೆ ಆತನು ॥

ಅಸಡ್ಡೆ ಬೇಸರ ಜಡನ ತ್ಯಜಿಸುತ
ತಿದ್ದಿಕೊಳ್ಳುತ ನಿಮ್ಮನು ।
ನಿಮ್ಮ ಮನದುಸಿರಾಗಿ ಚಿಂತಿಸಿ
ಬಿಗು ಮನದಿ ಜನರಾ ಸುಖವನು ॥

ಬೇಕು ಒಂದೆಡೆ ಛಲವು ನಮ್ಮಲಿ
ಛಲದಿ ಅದನಾವ್ ಬೆಳೆಯಿಸಿ ।
ಐಕ್ಯದಿಂದಲಿ ಕೂಡಿ ನಡೆಯುವ
ಬರುವ ಕಷ್ಟವ ಛೇದಿಸಿ ॥

ಕರೆಯುತಿದೆ ಸಂಗಾತಿ ನೀಬಾ
ಎನುತ ಕೊಡಗಿನ ಪತ್ರಿಕೆ ।
ಸಕಲ ನೋವನು ಮರೆತು ಬನ್ನಿರಿ
ನೀವು ಅದರಾ ಪಕ್ಕಕೆ ॥

ಹಳ್ಳಿ ವನಸಿರಿ ನಡುವೆ ಜನಿಸಿದ
ಪಾಪ ತೊಳೆವ ಕಾವೇರಿಯೆ ।
ಅಕಳಂಕದಿಂದಲಿ ನಡೆಸು ನೀನಿದ
ನಿನಗೆ ಶರಣು ನಾ ನಮಿಸುವೆ ॥

● ರಚನೆ : **ಹೊದ್ದೆಟ್ಟಿ ಭವಾನಿಶಂಕರ್**
ಬೆಂಗಳೂರು,

# ನಮ್ಮ ಜನಾಂಗದ ಪ್ರಥಮ ಸಮಾಜ ಸೇವಕಿ, ಕೊಡಗು ಜಿಲ್ಲಾ ಪರಿಷತ್ತಿನ ಉಪಾಧ್ಯಕ್ಷೆ ಅಮೆಮನೆ ಕಮಲಾ ಗಣಪತಿ

ಒಬ್ಬರು ಸಮಾಜಕ್ಕಾಗಿ, ಸಮಾಜವು ಎಲ್ಲರಿಗಾಗಿ ಎಂಬ ಮಾತು ಎಲ್ಲಾ ಜನಾಂಗದಲ್ಲಿಯೂ ಇದೆ. ಒಬ್ಬರ ಕೀರ್ತಿ ಜನಾಂಗದ ಮೇಲೆ ಪರಿಣಾಮ ಬೀರುವುದು. ನಮ್ಮ ಗೌಡ ಸಮಾಜದಲ್ಲಿ ಹೆಣ್ಣು ಮಕ್ಕಳು ಗೌರವ ಸ್ಥಾನಕ್ಕೆ ಬಂದದ್ದು ಅತೀ ವಿರಳ. ಆದರೆ ಇಂದು ನಮ್ಮ ಸಮಾಜ ಚೇತರಿಸುತ್ತಿದೆ. ಇದೊಂದು ಶುಭ ಲಕ್ಷಣ. ಸಮಾಜಕ್ಕೆ ಸೇವೆ ಸಲ್ಲಿಸುವುದಕ್ಕೆ ತನ್ನನ್ನು ತಾನೇ ಅರ್ಪಿಸಿಕೊಂಡ ಒಂದು ಮುಗ್ಧ, ಮುದ್ದಿನ ಮುತ್ತು ಮಣಿಯ ಕಾರ್ಯವೈಖರಿಯನ್ನು ನಮ್ಮ ಸಮಾಜಕ್ಕೆ ಪರಿಚಯಿಸುವುದು ಸೂಕ್ತ. ಅವರನ್ನು ಅನುಕರಿಸಿ ಇತರರು ಮುಂದೆ ಬರುವಂತಿರಬೇಕು.



**ಅಮೆಮನೆ ಶ್ರೀಮತಿ ಕಮಲಾ ಗಣಪತಿ**

ಕೊಡಗಿನಲ್ಲಿ ಶ್ರೀಮತಿ ಕಮಲಾ ಗಣಪತಿಯವರ ಹೆಸರು ಕೇಳದವರಿಲ್ಲ. 12–5–1950 ರಲ್ಲಿ ಮಡಿಕೇರಿ ಭಾಗಮಂಡಲ ನಾಡು ಕಡಿಯತ್ತೂರು ಗ್ರಾಮದ ದಿ|| ಬಾಡನ ಚಿಣ್ಣಪ್ಪ ಮತ್ತು ಮಾಚಮ್ಮನವರ 3 ಗಂಡು, 2ಹೆಣ್ಣು ಮಕ್ಕಳಲ್ಲಿ 2ನೇ ಮಗಳಾಗಿ ಜನಿಸಿದಳು. ದೈಹಿಕ ಬೆಳವಣಿಗೆ ತಾನಾಗಿಯೇ ಬರುತ್ತದೆ. ಜ್ಞಾನದ ಬೆಳವಣಿಗೆಗೆ ಶ್ರದ್ಧೆ, ಪ್ರಯತ್ನವು ಅತ್ಯಾವಶ್ಯಕ. ಈ ದೃಷ್ಟಿಯಲ್ಲಿ ಅಂದು ನಮ್ಮ ಈ ನಾಡು ಕೊಡಗು ಅಷ್ಟು ಪ್ರಗತಿಯಲ್ಲಿರಲಿಲ್ಲ. ಹೆಚ್ಚಿನ ವಿದ್ಯಾಭ್ಯಾಸಕ್ಕೆ ನೆಂಟರ ಮನೆ, ಶಾಲಾ ಬೋರ್ಡಿಂಗ್‌ನ್ನು ಆಶ್ರಯಿಸಬೇಕಾಗಿತ್ತು. ಅಥವಾ 7–8 ಕಿ. ಮೀ.ಗಳ ಕಾಲ್ನಡಿಗೆಯೇ ಗತಿಯಾಗಿತ್ತು. ಇದರಿಂದಾಗಿ ಅನೇಕರು ವಿದ್ಯಾಭ್ಯಾಸದಿಂದ ವಂಚಿತರಾದರು. ಪ್ರಾಥಮಿಕ ಶಾಲೆಯ ವಿದ್ಯಾಭ್ಯಾಸವನ್ನು ಮಡಿಕೇರಿ ತಾಲ್ಲೂಕು ಚೆಟ್ಟಿಗೇರಿಯಲ್ಲಿಯೂ, ಸೋಮವಾರಪೇಟೆ ತಾ|| ನಂಜರಾಯಪಟ್ಟಣದಲ್ಲಿಯೂ ಓದಿದಳು. ಪ್ರೌಢಶಾಲೆಗೆ ಸೇರಬೇಕಾದಾಗ ಆಡಿನಾಡೂರಿನಲ್ಲಿ ವಾಸವಿದ್ದು, 5ಮೈಲಿ ದೂರದಲ್ಲಿದ್ದ ಅಬ್ಬೂರು ಕಟ್ಟೆಯವರೆಗೆ ನಡೆದು ಅಲ್ಲಿಂದ ಬಸ್ಸಿನ ಮೂಲಕ ಸೋಮವಾರಪೇಟೆ ತಲುಪಿ ಅಲ್ಲಿಯ ಶಾಲೆಯಲ್ಲಿ ವ್ಯಾಸಂಗ ಮುಂದುವರಿಸಿದಳು. **S. S. L. C.** ಯನ್ನು ಮೈಸೂರು ಜಿಲ್ಲೆಯ ಗುಂಡ್ಲುಪೇಟೆಯ ದೊಡ್ಡಹುಂಡಿ ಬೋಗಪ್ಪ ಎಂಬ ಮುನ್ಸಿಪಲ್ ಶಾಲೆಯಲ್ಲಿ ಓದಿ ಪ್ರಥಮ ದರ್ಜೆಯಲ್ಲಿ ಪಾಸಾದಳು. ತನ್ನಲ್ಲಿದ್ದ ಛಲದ ಬಲವನ್ನು ಪ್ರದರ್ಶಿಸಿ ಜಯಶೀಲಳಾದ ಅಂದಿನ ಕಷ್ಟ ಕಾರ್ಪಣ್ಯಗಳನ್ನು ಎದುರಿಸಿ ಜಯಿಸಿದ ಮುದ್ದು ಬಾಲಕಿಯೇ ಈ ಕಮಲಾ ಗಣಪತಿ. ಬಿ. ಎ. ಪದವಿಯನ್ನು ಮೈಸೂರಿನ ಮಹಾರಾಣಿ ಕಾಲೇಜಿನಲ್ಲಿ ಪಡೆದರು. ತನ್ನ ಇಪ್ಪತ್ತೆರಡನೆಯ ಪ್ರಾಯದಲ್ಲಿ 1972 ರಲ್ಲಿ ಅವರು ಮಡಿಕೇರಿ ತಾ|| ಭಾಗಮಂಡಲನಾಡು ಕುಂದಚೇರಿ ಗ್ರಾಮದ ಅಮೆ ಮನೆತನದ ದಿವಂಗತ ಉತ್ತಯ್ಯನವರ ಪುತ್ರ ಗಣಪತಿಯವರನ್ನು ಲಗ್ನವಾದರು.

ಅವರ ಸಂಸಾರವು ಮಾವ ಉತ್ತಯ್ಯ, ಅತ್ತೆ ಗಂಗಮ್ಮನವರೊಂದಿಗೆ ಹೊಸ ಬಾಳ್ವೆ ಆರಂಭವಾಯಿತು. ಪತಿಯು ಮಡಿಕೇರಿಯಲ್ಲಿ ಅರಣ್ಯ ಇಲಾಖೆಯ ಉದ್ಯೋಗದವರು. ಮೇಲ್ಮಟ್ಟದ ಹುದ್ದೆ ಅಲ್ಲದಿದ್ದರೂ ಜೀವನ ಸಾಗುತ್ತಿತ್ತು. ಅರಣ್ಯ ಇಲಾಖೆಯಲ್ಲಿ ಮೇಲ್ಮಟ್ಟದ ನೌಕರರು ಗೌರವಾನ್ವಿತರು, ನಡುವರ್ಗದವರು ಪಾಡು ಪಡುವವರು. ಇವರ "ನೈಪು" ಕಾರ್ಯ ಮೇಲಿನವರಿಗೆ ಕೀರ್ತಿ, ಕೆಳಗಿನವರಿಗೆ ಭೀತಿ. ಇದು ಸರಕಾರಿ ನೌಕರಿಯ ಒಂದು ಮುಖ.

ದಾಂಪತ್ಯ ಜೀವನದಲ್ಲಿ ಗಂಡನಿಗೆ ನೆಚ್ಚಿನ ಹೆಂಡತಿಯಾಗಿ, ಸಾರ್ವಜನಿಕರಿಗೆ ಮೆಚ್ಚಿನ ಕಾರ್ಯಕರ್ತೆಯಾಗಿ, ತನ್ನ ಮಕ್ಕಳಿಗೆ ಪ್ರೀತಿಯ ತಾಯಾಗಿ, ಕಾರ್ಯಾಚರಣೆಯನ್ನು ಆರಂಭಿಸಿದರು. ಮಹಿಳೆಯರು ಸಾರ್ವಜನಿಕ ಸೇವೆ ಆರಂಭಿಸಿದರೆಂದರೆ ಸಮಾಜವು ಅವರನ್ನು ವಕ್ರ ದೃಷ್ಟಿಯಲ್ಲಿ ನೋಡುವುದು ಸಹಜ. ಸಾರ್ವಜನಿಕರ ನಿಂದನೆಗಳನ್ನು ವಂದನೆಗಳಿಂದ ಸ್ವೀಕರಿಸಿ ತಾನು ಏನು ಮಾಡಬೇಕೆಂಬ ಉದ್ದೇಶವಿಟ್ಟಿದ್ದರೆ, ಅದನ್ನು ಧೈರ್ಯದಿಂದ, ನಗುಮುಖದಿಂದ ಟೀಕೆಗಳನ್ನು ಅದುಮಿ ಮುನ್ನಡೆದ ಧೈರ್ಯದ ಸ್ತ್ರೀ ಮೂರ್ತಿಯೇ ಈಕೆ.

ಹಾಗೇ ಕಾರ್ಯನಿರ್ವಹಿಸಿದ್ದರ ಪರಿಣಾಮ ಈಕೆ 1977 ರಿಂದ ಜನತಾ ಪಾರ್ಟಿಯ ಸಕ್ರಿಯ ಕಾರ್ಯಕರ್ತೆ.

ಕರ್ನಾಟಕ ರಾಜ್ಯದ ಮಹಿಳಾ ವಿಭಾಗದಲ್ಲಿ ಸಂಘಟನಾ ಕಾರ್ಯದರ್ಶಿ, ಕೊಡಗು ಜಿಲ್ಲಾ ಜನತಾ ದಳದ ಸಂಘಟನಾ ಕಾರ್ಯದರ್ಶಿ ಜನತಾ ದಳದ ಹಿರಿಯ ಉಪಾಧ್ಯಕ್ಷೆ, ಸೋಮವಾರ ಪೇಟೆ ತಾ॥ ಮಹಿಳಾ ವಿಭಾಗ ಅಧ್ಯಕ್ಷೆ, 1986 ರಲ್ಲಿ ಕುಶಾಲನಗರ ವ್ಯವಸಾಯ ಸೇವಾ ಸಹಕಾರ ಬ್ಯಾಂಕ್ ನಿರ್ದೇಶಕಿ ಹಾಗೂ ಉಪಾಧ್ಯಕ್ಷೆ ಸ್ಥಾನ, 1995ರಲ್ಲಿ ಕೊಡಗು ಜಿಲ್ಲಾ ಪಂಚಾಯಿತಿ ಸದಸ್ಯೆಯಾಗಿ, ಇತ್ತೀಚೆಗೆ ತಾ॥ 5-4-97 ರಿಂದ ಕೊಡಗು ಜಿಲ್ಲಾ ಪಂಚಾಯಿತಿಯ ಉಪಾಧ್ಯಕ್ಷೆಯ ಪೀಠವನ್ನು ಅಲಂಕರಿಸಿ ಕಾರ್ಯ ಪ್ರವೃತ್ತರಾಗಿದ್ದಾರೆ. ಅವರ ದಕ್ಷತೆ, ಈ ಸಾಹಸವನ್ನು ಮೆಚ್ಚತಕ್ಕದ್ದೇ. ಇದು ಕೊಡಗಿಗೂ ಮತ್ತು ಗೌಡ ಜನಾಂಗಕ್ಕೂ ಸಂದ ಗೌರವವಾಗಿದೆ.

ಬಡಜನರಲ್ಲಿ ಆಶಾಭಾವನೆ ಮೂಡಿಸುವ ಕಣ್ಣುಗಳು ಆಶ್ವಾಸನೆ ನೀಡುವ ಹಸನ್ಮುಖಿ. ಹೃದಯ ಮಾತ್ರ ವಿಶಾಲವಾಗಿ ಕಷ್ಟ ಪರಿಹಾರಕ್ಕೆ ಬಂದವರಿಗೆ ಸಾಂತ್ವನ ನೀಡುವ ಬಯಕೆಯ ಹೊಸ ಪೀಳಿಗೆಯ ಲವಲವಿಕೆಯ ಕಾರ್ಯಕರ್ತೆ. ಅಧಿಕಾರ ಒಂದು ಮುಳ್ಳಿನ ಆಸನವೆಂಬ ಅರಿವು ಅವರಲ್ಲಿ ಮೂಡಿದೆ. ಆದರೆ ಹೃದಯವಂತೆ, ಕೈಲಾದ ಸಹಾಯ ಮಾಡುವೆನು ಎನ್ನುತ್ತಾರೆ.

ಮನೆ ಮಂದಿ ಆರೋಗ್ಯವಾಗಿರುವ ದಿವಸವೇ ಸುಖ ದಿನವೆನ್ನುತ್ತಾರೆ. ಆದರೆ ಸುಖವು ದುಃಖಗಳ ಮದ್ಯೆ ಹೊಳೆಯುವುದೇ ಮಿಂಚು ಎನ್ನುವರು. ಹೆಣ್ಣಾಗಿ, ತಾಯಾಗಿ, ಸಾರ್ವಜನಿಕ ಕಾರ್ಯಕರ್ತೆಯಾಗಿ ಸಂಸಾರವನ್ನು ತೇಲಿಸಿಕೊಂಡು ಹೋಗುವುದು ಸಾಮಾನ್ಯದ ಕೆಲಸವಲ್ಲ. ಅನುಭವಿಸಿದವರಿಗೆ ಮಾತ್ರ ಕಷ್ಟ ಕಾರ್ಪಣ್ಯ ಗೊತ್ತು. ಅನುಭವದಲ್ಲಿ ಆನಂದವಿದೆ. ಎಂಬುದನ್ನು ಅವರು ಅರಿತುಕೊಂಡಿದ್ದಾರೆ. ಅಧಿಕಾರ ಶಾಶ್ವತವಲ್ಲ. ರಾಜಕೀಯ ಸ್ಥಿರವಲ್ಲ. ಆದರೆ ಸಹಾಯ ಹಸ್ತ ಸ್ಥಿರಾಸ್ಥಿ ಎಂದರು.

ನವ ಯುವ ಪೀಳಿಗೆಗೆ ಅವರ ಸಂದೇಶ ಎಂದರೆ ಜೀವನ ನಡೆಸಲು ದೃಢ ನಿರ್ಧಾರ ಬೇಕು. ಶಿಸ್ತು, ವಿದ್ಯೆ, ಬುದ್ಧಿ ಇರಬೇಕು. ದೇಹಾಭಿಮಾನದಿಂದ ದೇಶಾಭಿಮಾನದೆಡೆಗೆ ಸಾಗಬೇಕು. ಒಟ್ಟಿನಲ್ಲಿ ಮಾನವನಿಗೆ ಮಾನವೀಯತೆ ಇರಬೇಕು. ಅವರು ವಿದ್ಯೆಗೆ ಬಹಳ ಮಹತ್ವ ಕೊಡುತ್ತಾರೆ. ವಿದ್ಯೆ ಮಾನವನಿಗೆ ಗುಪ್ತ ಧನ ಇದ್ದಂತೆ. ಅದೇ ಸೌಂದರ್ಯ, ಕೀರ್ತಿ, ಸುಖ, ಭೋಗಕ್ಕೆ ಕಾರಣ. ಇದು ಅವರ ನಿಲುವು. ಒಬ್ಬನೇ ಒಬ್ಬ ಗಂಡು ಮಗ ಲಕ್ಷ್ಮೀಕಾಂತ್ ಪದವಿಧರ, ಹಿರಿಯವಳು ರೇಖಾ ಮೈಸೂರು ಮಾನಸಗಂಗೋತ್ರಿಯಲ್ಲಿ ದ್ವಿತೀಯ ಎಂ. ಎ. ಓದುತ್ತಿರುವಳು. ಕಿರಿಯವಳು ಕವಿತಾ, ಮೈಸೂರು ಮಹಾರಾಣಿ ಕಾಲೇಜಿನಲ್ಲಿ ಅಂತಿಮ ಬಿ.ಎಸ್ಸಿಯಲ್ಲಿರುವಳು.

ಒಟ್ಟಿನಲ್ಲಿ ಕಮಲಾ ಗಣಪತಿಯವರು ನಮ್ಮ ಗೌಡಜನಾಂಗದಲ್ಲಿ ಅರಳುತ್ತಿರುವ ಪ್ರತಿಭಾವಂತೆ ನೈಜ ಕಮಲ. ಕೊಡಗಿನ ಜನರು ವಿಶೇಷವಾಗಿ ಗೌಡ ಜನಾಂಗವು ಇವರ ಮೇಲೆ ಉಜ್ವಲ ಭವಿಷ್ಯವನ್ನು ಕಾಣಲಿ. ಕುಲದೇವತೆ ಅವರಿಗೆ ಕಳಂಕರಹಿತ ಜೀವನವನ್ನು ಕೊಟ್ಟು, ತೃಪ್ತಿ, ನೆಮ್ಮದಿ ನೀಡಲಿ ಎಂದು ಸಂಗಾತಿಯು ಬಯಸುತ್ತದೆ.

● **ಚೇಂದ್ರಿಮಾಡ್ತ ಜಿ. ಮುತ್ತಪ್ಪ**
ಕುಶಾಲನಗರ.

---

## ಆಸೆ

ಮುಂದಿನ ಜನ್ಮದಲ್ಲಿ ಮರವಾಗುವಾಸೆ
ಆದರೇನು ಮಾಡಲಿ ನನ್ನನ್ನು ಕಡಿಯುವರೆಂಬ ಭಯ.

ಮುಂದಿನ ಜನ್ಮದಲ್ಲಿ ನದಿಯಾಗುವಾಸೆ
ಆದರೇನು ಮಾಡಲಿ ನನ್ನಲ್ಲಿ ಕೊಳಕು, ವಿಷವನ್ನು ಹರಿಯಬಿಡುವರೆಂಬ ಭಯ.

ಮುಂದಿನ ಜನ್ಮದಲ್ಲಿ ನದಿಯಾಗುವಾಸೆ
ಆದರೇನು ಮಾಡಲಿ ನನ್ನಲ್ಲಿ ವಿಷಾನಿಲ ಬೆರೆಸುವರೆಂಬ ಭಯ.

ಮುಂದಿನ ಜನ್ಮದಲ್ಲಿ ಪ್ರಾಣಿಯಾಗುವಾಸೆ
ಆದರೇನು ಮಾಡಲಿ ನನ್ನನ್ನು ಬೇಟೆಯಾಡುವರೆಂಬ ಭಯ.

ಮುಂದಿನ ಜನ್ಮದಲ್ಲಿ ಕವಿಯಾಗುವಾಸೆ
ಆದರೆ ಅದನ್ನು ಎಲ್ಲರೂ ಓದುವುದಿಲ್ಲವೆಂಬ ಭಯ.

● **ರಮಾಮಣಿ ಚಿಕ್ಕಚೆಲ್ಲಯ್ಯ,** ಮಡಿಕೇರಿ

❁ ❁ ❁

## : ಸೂಕ್ತಿ :

ಜಯ, ಯಶಸ್ಸು ಒಬ್ಬನನ್ನು ಪರಿಚಯಿಸದು
ಉತ್ತಮವಾಗಿ ಕೆಲಸ ಮಾಡಬೇಕು, ಉತ್ತಮವಾಗಿ ಬಾಳಬೇಕೆಂಬ ನಿಮ್ಮ ಯತ್ನವೇ ನಿಮ್ಮನ್ನು ಪರಿಚಯಿಸುತ್ತದೆ.

– ಡಗ್ಲಾಸ್ ಮಾಲ್ಚ್

● ಸಂಗ್ರಹ – **ಕುದುಕುಳಿ ಮಧುರಾಬೆಳ್ಳಿಯಪ್ಪ**
ಮೂಡಬಿದ್ರೆ

# ಸಂಪ್ರದಾಯದ ಬಗ್ಗೆ ಒಂದು ಕಿರು ನೋಟ

ಭಾರತೀಯರ ಜೀವನದಲ್ಲಿ ಜಾನಪದ, ಗಾದೆಗಳು ಮತ್ತು ಸಂಪ್ರದಾಯಗಳು ಹಾಸು ಹೊಕ್ಕಿದ್ದು, ಜೀವನದ ಪ್ರತಿಯೊಂದು ಶುಭ ಹಾಗೂ ಅಶುಭ ಕಾರ್ಯಗಳಲ್ಲಿ ಅವುಗಳ ಪಾಲನೆಯಾಗುತ್ತಿದೆ. ಭಾರತೀಯ ಇವುಗಳಿಲ್ಲದೆ ಸಮಾರಂಭಗಳನ್ನು ನಡೆಸಲು ಸಾಧ್ಯವೇ ಇಲ್ಲ ಎನ್ನುವಂತೆ ಅವುಗಳಿಗೆ ಅಂಟಿಕೊಂಡಿರುವುದು ಕಟು ಸತ್ಯ. "ವೇದ ಸುಳ್ಳಾದರೂ ಗಾದೆ ಸುಳ್ಳಾಗಲ್ಲ" ಅದೇ ರೀತಿ ಪ್ರತಿಯೊಂದು ಸಂಪ್ರದಾಯದ ಹಿಂದೆ ವಿಜ್ಞಾನ ಅಡಗಿದೆ. ನನ್ನ ಮಿತ್ರ ವಕೀಲರೊಬ್ಬರು ಬಹಳ ವರ್ಷಗಳ ಹಿಂದೆ ಈ ಮಾತನ್ನು ಹೇಳಿದಾಗ, ಒಂದೆರಡು ಉದಾಹರಣೆಗಳನ್ನು ಕೊಟ್ಟರು. ಅಂದರೆ ನಾವು ಗಂಗಾ ನದಿಯಲ್ಲಿ ಸ್ನಾನ ಮಾಡಿದರೆ, ನಮ್ಮ ರೋಗ ರುಜಿನಗಳೆಲ್ಲ ವಾಸಿಯಾಗುತ್ತದೆ, ಇದು ನಮ್ಮ ನಂಬುಗೆ. ಆದರೆ ಇದರ ಹಿಂದೆ ವೈಜ್ಞಾನಿಕ ತರ್ಕವಿದೆ. ಅಂದರೆ ಗಂಗಾ ಜಲಕ್ಕೆ ಕೆಲವು ರೋಗಗಳನ್ನು ನಿಗ್ರಹಿಸುವ ಶಕ್ತಿಯಿದೆ. ಆದುದರಿಂದ ಅದರ ನೀರಿನಲ್ಲಿ ಮುಳುಗಿ ಸ್ನಾನ ಮಾಡಿದರೆ ಮಾನವ ಶರೀರದ ರೋಗಗಳು ವಾಸಿಯಾಗುತ್ತವೆ. ಅದೇ ರೀತಿಯಲ್ಲಿ ನಾವು ಮದುವೆ ಮುಂತಾದ ಶುಭ ಸಮಾರಂಭಗಳಲ್ಲಿ ಮದುಮಕ್ಕಳಿಗೆ ಅಕ್ಷತೆ [ಅಕ್ಕಿ ಕಾಳು] ಹಾಕಿ ಹರಸುವುದು ಸಂಪ್ರದಾಯ. ಆದರೆ ಅದರ ಹಿಂದೆಯೂ ವೈಜ್ಞಾನಿಕ ತರ್ಕವಿದೆ. ಅಕ್ಕಿ ಕಾಳಿಗೆ ಮನುಷ್ಯನ ಶರೀರದಲ್ಲಿಯ ಕೆಲ ಕ್ಷಕಿರಣಗಳನ್ನು ಹೀರುವ ಶಕ್ತಿಯಿದೆ. ನಾವು ಉತ್ತಮ ಮನಸ್ಸಿನಿಂದ ಮಧು ಮಕ್ಕಳಿಗೆ ಆಶೀರ್ವದಿಸಲು ಹಿಡಿ ಅಕ್ಕಿಕಾಳನ್ನು ಹಿಡಿದು ಮಧುಮಕ್ಕಳ ತಲೆಯ ಮೇಲಿಂದ ಹಾಕಿದಾಗ ನಮ್ಮ ಆಶೀರ್ವಾದವು ಅಕ್ಕಿ ಕಾಳಿನ ಮುಖಾಂತರ ಅವರಿಗೆ ಸಲ್ಲುತ್ತದೆ.

ನಾನು ಈ ವಿಷಯವನ್ನು "ಸಂಗಾತಿ"ಯ ಮುಖಾಂತರ ಪ್ರಚುರ ಪಡಿಸಲು ಕಾರಣವೇನೆಂದರೆ ಈ ನಮ್ಮ ಸಂಪ್ರದಾಯಗಳು ನಮ್ಮಲ್ಲಿ ಹಾಸು ಹೊಕ್ಕಾಗಿ ಅಂಟಿದ್ದರೂ ನಾವು ಸಮಯ ಹಾಗೂ ಸಂದರ್ಭೋಚಿತವಾಗಿ ಕೆಲವನ್ನು ಕೈಬಿಡಬೇಕಾಗುತ್ತದೆ. ಇಲ್ಲಿ ಮದುವೆಯಂತಃ ಶುಭ ಸಮಯದಲ್ಲಿ ನಾವುಗಳು ಅಕ್ಷತೆ ಕಾಳು ಹಾಕಿ ಆಶೀರ್ವಾದ ಮಾಡುವುದರೊಂದಿಗೆ ಮಧುಮಕ್ಕಳಿಗೆ ಉಡುಗೊರೆಯಾಗಿ ಹಣ ಕಟ್ಟುವ ಸಂಪ್ರದಾಯ ನಡೆದುಬಂದಿದೆ. ಈ ಸಂಪ್ರದಾಯವನ್ನು ಅವಲೋಕಿಸಿ ನೋಡಿದಾಗ ನನಗನ್ನಿಸುತ್ತದೆ, ಈ ಹಿಂದೆ ನಮ್ಮ ಹಿರಿಯರು ಗ್ರಾಮಗಳಲ್ಲಿ ಮದುವೆ ಮಾಡುವ ಸಮಯ, ಬಡತನದ ಕಾರಣ ಮದುವೆಯಂತ ಶುಭ ಸಮಾರಂಭಗಳಲ್ಲಿ ನೂರಾರು ಜನರಿಗೆ ಊಟ ಹಾಕಿ ಹಲವು ರೀತಿಯಲ್ಲಿ ಹಣ ವ್ಯಯಿಸಿ, ಮುಂದೆ ಇದರಿಂದಾಗಿ ಸಾಲದಲ್ಲಿ ಮುಳುಗದಿರಲಿ ಎಂದು ಅತಿಥಿಗಳಾಗಿ ಬಂದವರು ಅವರುಗಳ ಕೈಲಾದಷ್ಟು ಹಣವನ್ನು ಉಡುಗೊರೆ ರೂಪದಲ್ಲಿ ನೀಡುತ್ತಿದ್ದಿರಬಹುದು. ಇದೇ ಕ್ರಮ ತಿಥಿಯಂತಹ ಸಮಾರಂಭಗಳಲ್ಲೂ ನಡೆಯುತ್ತಿದೆ. ಆದರೆ ಈಗ ಶೇಕಡ 95 ರಷ್ಟು ಮಂದಿ ತಿಥಿ ಕಾರ್ಯಕ್ರಮದಲ್ಲಿ ಈ ಸಂಪ್ರದಾಯವನ್ನು ಕೈ ಬಿಟ್ಟಿದ್ದಾರೆ. ಆದರೆ ಮದುವೆ ಕಾರ್ಯದಲ್ಲಿ ಏಕೆ ಈ ಸಂಪ್ರದಾಯ ಮುಂದುವರಿಯುತ್ತಿದೆ. ನಮ್ಮ ಜನ ಕೊಡಗಿನಲ್ಲಿ, ಗೌಡರೇ ಇರಲಿ, ಕೊಡವರೇ ಇರಲಿ ಅಥವ ಇನ್ನಿತರ ಜನಾಂಗವೇ ಆಗಿರಲಿ ಈಗ ಆರ್ಥಿಕತೆಯಲ್ಲಿ ಬಹಳ ಮೇಲೆ ಬಂದಿರುವುದಾಗಿದೆ. ಅವರ ಜೀವನದ ಮಟ್ಟ, ದಿನನಿತ್ಯದ ವ್ಯವಹಾರಗಳಿಗೆ ಖರ್ಚು ಮಾಡಲು ಹಣದ ಕೊರತೆಯಿಲ್ಲದಷ್ಟು ಮೇಲೆ ಬಂದಿದೆ ಎಂದರೆ ಅತಿಶಯೋಕ್ತಿ ಆಗಲಾರದು. ನಮ್ಮ ಜನ ಮದುವೆಯನ್ನು ಎಷ್ಟು ವಿಜ್ರಂಭಣೆಯಿಂದ ನಡೆಸುತ್ತಾರೆಂದರೆ ಸ್ಟಾರ್ ಹೋಟೇಲಿನಲ್ಲಿ ಸಿಗುವ ಎಲ್ಲಾ ಸೌಲಭ್ಯಗಳನ್ನು ಅನಾಮತ್ತಾಗಿ ಎತ್ತಿ ತಂದು, ಗೌಡ ಯಾ ಕೊಡವ ಸಮಾಜಗಳಲ್ಲಿ ಜನರಿಗೆ ಉಣಬಡಿಸುತ್ತಾರೆ. ಕುಡಿದು ತೂರಾಡುವಷ್ಟು ಮದ್ಯದ ಸರಬರಾಜು ಮಾಡುತ್ತಾರೆ. ಹಣದ ಹೊಳೆ ಹರಿಸುತ್ತಾರೆ. ಆದರೆ ಇಷ್ಟೆಲ್ಲಾ ಖರ್ಚಾದ ಮೇಲೆ ಹಣ ಕಟ್ಟುವ ನೆಪದಲ್ಲಿ ರೂ. 10 ರಿಂದ 50 ರವರೆಗೆ ಅತಿಥಿಗಳಿಂದ ಬರುವ ಉಡುಗೊರೆಯನ್ನು ಪಡೆಯುತ್ತೇವೆ. ಜಿಟ್ಟದಷ್ಟು ಖರ್ಚು ಮಾಡಿದ ನಂತರ ಈ ಉಡುಗೊರೆಯಾಗಿ ಸಿಗುವ ರೂ. 15 ರಿಂದ 20 ಸಾವಿರ ರೂಪಾಯಿಗಳು ಮದುವೆ ಮಾಡಿಸಿದಾತನಿಗೆ ಮದುವೆ ನಡೆಸಲು ಕೈಯಿಂದ ಎತ್ತಿ ಸಹಕರಿಸಿದಂತಾಗುತ್ತದೆಯೇ ? ನಾವೇಕೆ ಈ ಸಂಪ್ರದಾಯವನ್ನು ಕೈ ಬಿಟ್ಟು ಅತಿಥಿಗಳಿಂದ ವಸ್ತುಗಳ ರೂಪದಲ್ಲಿ ಬಂದ ಉಡುಗೊರೆಯನ್ನೋ–ಅಥವಾ ಆಶೀರ್ವಾದವೆಂಬ ಅಕ್ಷತೆ ಕಾಳನ್ನೋ ಪಡೆದು ಸಂತುಷ್ಟರಾಗಬಾರದು ? ಮದುವೆ ಮಂಟಪದಲ್ಲಿ ಮದುಮಕ್ಕಳು ಅತಿಥಿಗಳ ಮುಂದೆ ಕೈ ಚಾಚುವ ಪ್ರವೃತ್ತಿಯನ್ನು ನಾವು ಏಕೆ ತೊಡೆದು ಹಾಕಬಾರದು ? ನಮ್ಮ ನೆರೆ ಜಿಲ್ಲೆಯಾದ ದಕ್ಷಿಣ ಕನ್ನಡದ ಜನತೆ ಈ ಸಂಪ್ರದಾಯವನ್ನು ಹೆಚ್ಚಿನಂಶ ಕೈಬಿಟ್ಟು "ಆಶೀರ್ವಾದವೇ ಉಡುಗೊರೆ" ಎಂಬ ಕ್ರಮವನ್ನು ಪಾಲಿಸುತ್ತಿರುವುದು ಕಂಡು ಬರುತ್ತಿದೆ. ನಮ್ಮ ಜನತೆ ಈ ಬಗ್ಗೆ ಚಿಂತಿಸುವಂತಾಗಬೇಕು ಎಂದು ನನ್ನ ಕಳಕಳಿಯ ಮನವಿ.

**● ಸೂರ್ತಲೆ ಆರ್. ಸೋಮಣ್ಣ**
ಮಡಿಕೇರಿ.

# ಮಂಥನ

## ಪ್ರಗತಿ ಶೀಲ ಸಮಾಜದಲ್ಲಿ ಬದಲಾವಣೆ ಅನಿವಾರ್ಯ, ಬದಲಾವಣೆ ನಿರಂತರ

–ಬೆಂಜಮಿನ್ ಡಿಸ್‌ರೇಲಿ

ನಮ್ಮ ಜನರ ಏಳಿಗೆಗಾಗಿ ನಾವೆಲ್ಲರೂ ಒಗ್ಗಟ್ಟಿನಿಂದ ಶ್ರಮಿಸೋಣ. ನಿರಂತರ ಬದಲಾವಣೆಗೊಳಪಡುತ್ತಿರುವ ಇಂದಿನ ಸಮಾಜದಲ್ಲಿ ನಮ್ಮ ಜನರು ಮುಂದೆ ಬರಲು ನಮ್ಮಲ್ಲಿರುವ ಆಚಾರ ವಿಚಾರಗಳ ಚಿಂತನೆ ನಡೆಸುವುದು ಬಹು ಅಗತ್ಯ. ಜೊತೆಗೆ ತಿಳುವಳಿಕೆ ಮೂಡಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯವೂ ಹೌದು.

ಆಧುನಿಕ ಯುಗದತ್ತ ದಾಪುಗಾಲು ಹಾಕುತ್ತಿರುವ ಈ ಸಮಾಜದಲ್ಲಿ ನಾವು ನಮ್ಮ ಆತ್ಮಗೌರವಾಭಿಮಾನಕ್ಕೆ ಧಕ್ಕೆ ಬರದಂತೆ ಸ್ಥೈರ್ಯದಿಂದ ಬದುಕುವುದು ಒಂದು ಕಲೆಯೇ ಎನ್ನಬಹುದು.

ಇಷ್ಟೆಲ್ಲ ಪೀಠಿಕೆ ಏಕೆ ಅಂತ ಯೋಚಿಸ್ತೀರ ? ಹಾಂ, ನಮ್ಮ ಜನರ ಏಳಿಗೆಗಾಗಿ, ನನ್ನ ಈ ಬರಹ ಕಿಂಚಿತ್ ಆದರೂ ಅವರ ಬದಲಾವಣೆಗೆ ಪ್ರಯೋಜನವಾದರೆ ಅದೇ ಸಾರ್ಥಕ. ನನ್ನ ಉದ್ದೇಶವೂ ಕೂಡ.

"ಓ, ಕೊಡಗಿನವರು ಬಹಳ ಧೈರ್ಯವಂತರು ಬಿಡಿ, ಎಲ್ಲದರಲ್ಲೂ ಬಹಳ ನೀಟು, ಮಿಲಿಟ್ರಿ ಸಿಸ್ಟಮ್ ಬಿಡಿ ನಿಮ್ದು" ಜನರ ಮಾತಿಗೆ, ನನ್ನ ತಲೆ ಹೆಮ್ಮೆಯಿಂದ ಬೀಗುತ್ತಿತ್ತು. ಇವರಿಗೆ ನಮ್ಮ ಜನರ ಬಗ್ಗೆ ಎಂತಹ ಒಳ್ಳೆ ಅಭಿಮಾನ ಎಂದು.

ಆದ್ರೆ....

ಆದ್ರೆ ಎನ್ನುವಾಗ ಯಾಕೆ ಅಂತೀರಾ ? ಯಾವಾಗ ನಾನು ಸಭೆ ಸಮಾರಂಭಗಳಲ್ಲಿ ಹೆಚ್ಚಿಗೆ ಪಾಲ್ಗೊಳ್ಳಲು ಶುರುಮಾಡಿದ್ನೋ ಅಂದೇ ನನಗೆ ಗೊತ್ತಾಯ್ತು. ನಮ್ಮವರ ರೀತಿ ನೀತಿಗಳ ವರ್ತನೆ.

ಪಾಪ ಹೊರಗಿನ ಜನಕ್ಕೆ ನಮ್ಮವರ ಬಗ್ಗೆ ಗೊತ್ತಿರುವ ಕೆಲವು ವಿಚಾರ ಇಲ್ಲಿಗೆ ಸೀಮಿತವಾಗಲಿ. ಬೇರೆ ಇನ್ನೂ ಹೆಚ್ಚಿಗೆ ಗೊತ್ತಾಗುವುದು ಬೇಡ ಅಂತ. ಏಕೆಂದರೆ ಮೇಲೆ ಹತ್ತಿಸಿದ ನನಗೆ ಪರ್ವತದ ಮೇಲಿಂದ ಕೆಳಗೆ ತಳ್ಳಿದಂತಾಗುವುದು ಬೇಡವಲ್ಲ ಅದಕ್ಕೆ.

ನಮ್ಮವರಲ್ಲಿ ಅವಿದ್ಯಾವಂತರಿಂದ ಹಿಡಿದು ವಿದ್ಯಾವಂತರಲ್ಲೂ ಆಧುನಿಕತೆಯ ಈ ಯುಗದಲ್ಲೂ ಇನ್ನೂ ತಿಳುವಳಿಕೆ ಮೂಡಿಲ್ಲ ವಲ್ಲ ಅನ್ನುವುದೇ ವಿಷಾದನೀಯ. ತಿಳುವಳಿಕೆಗೆ ವಿದ್ಯೆ ಬೇಡ ಕಿಂಚಿತ್ ಪ್ರಪಂಚ ಜ್ಞಾನವಿದ್ದರೆ ಸಾಕಲ್ಲವೆ. ಇತರರ ಒಳ್ಳೆಯ ಗುಣ ನೋಡಿಯಾದರೂ ಕಲಿಯಬಹುದಲ್ಲ.

ನಮ್ಮ ಸಂಘದ ಸಭೆಗೆ ನಾನೊಮ್ಮೆ ಹೋಗಿದ್ದಾಗ ಅಲ್ಲಿ ನಡೆದ ಅಂದಿನ ಘಟನೆ ಇನ್ನೂ ನನ್ನಿಂದ ಮರೆಯಲಾಗಿಲ್ಲ. ಬರೀ ಒಂದು ಚಿಕ್ಕ ವಿಚಾರ ದೊಡ್ಡ ಹಗರಣಕ್ಕೆ ನಾಂದಿಯಾಯಿತು. ಇಬ್ಬರ ಜಗಳ ಮೂರಕ್ಕೆ ಹೋಗಿ ಕೊನೆಗೆ ಇಡೀ ಯುವಕರ ಗುಂಪೇ ಗದ್ದಲದಲ್ಲಿ ಪಾಲ್ಗೊಂಡಿತು. ಮಾತಿನ ಚಕಮಕಿ, ಕೈ ಕೈ ಮಿಲಾಯಿಸುವತ್ತ ಹೋಗಿ, ಇದ್ದ ಬದ್ದ ಕುರ್ಚಿಗಳೂ ಗಾಳಿಯಲ್ಲಿ ಹಾರಾಡಲು ಶುರುಮಾಡಿದವು. ಸದ್ಯ ನಾಲ್ಕು ಗೋಡೆಗಳ ಮಧ್ಯೆ ನಿಂತಿದ್ದರೆ ಚೆನ್ನಿತ್ತು ಈ ಜಗಳ, ಆದರದೂ ಮೀರಿ ರಸ್ತೆವರೆಗೂ ಬರುವುದೆ. ಪಕ್ಕದ ಬಿಲ್ಡಿಂಗ್‌ನಲ್ಲಿ ನಡೆಯುತ್ತಿದ್ದ ಕೊಡಗು ಸಂಘದವರಿಗೂ ರಸ್ತೆಯಲ್ಲಿ ನಡೆದಾಡುತ್ತಿದ್ದ ದಾರಿ ಹೋಕರಿಗೂ ಇದೊಂದು ತಮಾಷೆಯ ಸೀನ್ ಆಗಿತ್ತು. ಆ ಜನರಂದು ಅಂದು ಕೊಂಡಿರಬಹುದು. "ಕ್ಯಾ ಸೀನ್ ಹೈ" ಎಂದು. ಆದರೆ ನಮಗಂದು ಎಲ್ಲರ ಮುಂದೂ ತಲೆ ತಗ್ಗಿಸುವಂತ ಹೇಯ ಘಟನೆ ಆಗಿತ್ತು.

ಇದು ನಮ್ಮ ಜನರ ಶ್ರೇಯೋಭಿವೃದ್ಧಿಗೆ ಮಾರಕವಲ್ಲದೆ ಪೂರಕವಂತೂ ಅಲ್ಲವಲ್ಲ. ಒಂದು ಗೂಡಿ ಬಾಳಬೇಕಾದ ನಾವೇ, ಜಗಳದಲ್ಲಿ ದೂರ ದೂರವಾದರೆ ನಮ್ಮ ಜನರು ಮುಂದುವರಿಯುವುದಾದರೂ ಹೇಗೆ ?

ಚಿಕ್ಕ ವಿಚಾರಗಳನ್ನು ಅಲ್ಲಿಗೇ ಬಿಟ್ಟಿದ್ದರೆ, ತಮ್ಮ ಘನತೆಗೇನು ಕುಂದುಂಟಾಗುತ್ತಿರಲಿಲ್ಲ. ಅದನ್ನೇ ದೊಡ್ಡ ಹಗರಣ ಮಾಡಿ ಘನತೆಗೆ ಪೆಟ್ಟು ತಂದು ಕೊಂಡರಲ್ಲದೆ ಮನೆತನದ ಮಾನವನ್ನೂ ಹರಾಜು ಹಾಕಿಕೊಂಡರಷ್ಟೆ. ಇಲ್ಲಿ ಗಲಾಟೆ ಆಗಿದ್ದು ಅವಿದ್ಯಾವಂತರಲ್ಲಿ ಅಲ್ಲ, ವಿದ್ಯಾವಂತರಲ್ಲಿ ಅನ್ನುವುದೇ ಖೇದದ ಸಂಗತಿ.

ವಿದ್ಯಾವಂತ ಯುವಕರು ಮುಂದಿನ ಪೀಳಿಗೆಗೆ ದಾರಿದೀಪವಾಗಬೇಕೇ ಹೊರತು ದಾರಿ ತಪ್ಪಿಸುವಂತವರಾಗಬಾರದು ಅಲ್ಲವೆ.

ನಮ್ಮ ಜನರ ಇನ್ನೊಂದು ಕೆಟ್ಟ ಅಭ್ಯಾಸ, ಕುಡಿದು ಸಭೆಗಳಿಗೆ ಹೋಗುವುದು. ಹೋದರೇನೋ ಸರಿ, ತೆಪ್ಪಗೆ ಕುಳಿತಿರುತ್ತಾರೆಯೇ, ಅದೂ ಇಲ್ಲ ತಮ್ಮ ಹೆಂಡತಿ, ಮಕ್ಕಳ ಮುಂದೆಯೇ ಕೆಟ್ಟದಾಗಿ ವರ್ತಿಸಿ, ಅವರ ತಲೆ ಕೆಳಗೆ ಹಾಕುವ ಹಾಗೆ ಮಾಡುವ ಪರಿಯಂತೂ ಬಹಳ ಶೋಚನೀಯ.

ಕುಡಿಯಿರಿ ಬೇಡವೆಂದಲ್ಲ ಅದಕ್ಕೂ

ಒಂದು ಮಿತಿ ಇದೆಯಲ್ಲವೆ. ಹಿಂದಿನ ಕಾಲ ದಿಂದಲೂ ನಡೆದು ಬಂದ ಈ ಪದ್ಧತಿ ಯನ್ನು ಅಷ್ಟು ಸುಲಭವಾಗಿ ಓಡಿಸಲಾಗು ವುದಿಲ್ಲ ಬಿಡಿ.

ಮಲೆನಾಡಿನ ಆ ಮಳೆ, ಚಳಿಗಾಳಿಗಳಿಗೆ ಒಡ್ಡಿದ ದೇಹಕ್ಕೆ, ಅದರ ಉಷ್ಣತೆ ಕಾಪಾಡಲು, ಜೊತೆಗೆ ಹೊಲಗದ್ದೆಗಳಲ್ಲಿ ದುಡಿದು ದಣಿವಾದಾಗ ದೇಹದ ನೋವು ಶಮನವಾಗಲು, ಇವರ ಮೊರೆ ಹೋಗುತ್ತಿದ್ದ ರೇನೋ ಸರಿ. ಆದ್ದರಿಂದು ಬದಲಾದ ಈ ಕಾಲದಲ್ಲೂ ಬೆವರು ಸುರಿಯುವಷ್ಟು ಸುಡು ಬೇಸಿಗೆಯಲ್ಲೂ ಕಂಠಮಟ್ಟ ಕುಡಿದು ತೂರಾಡುತ್ತಾ ನಿಲ್ಲಲೂ ಆಗದೆ ಅಡ್ಡಾದಿಡ್ಡಿ ಕಾಲು ಹಾಕುತ್ತ ಇನ್ನೊಬ್ಬರ ಹೆಗಲಿಗೆ ಜೋತುಬಿದ್ದು ಸಮಾರಂಭಕ್ಕೆ ಆಗಮಿಸುವ ಮಹೋದಯರಿಗೆ, ಅಭಿನಂದಿಸಲು ನನ್ನ ನಿಘಂಟಿನಲ್ಲಂತೂ ಪದಗಳಿಲ್ಲ ಬಿಡಿ.

ಸಭೆ ಸಮಾರಂಭಗಳಿಗೆ ನಿಮ್ಮನ್ನು ಆಹ್ವಾನಿಸುವುದು ಇತರರೊಡನೆ ತಮ್ಮ ಪರಿಚಯ, ಸ್ನೇಹ, ಸಂಬಂಧಗಳನ್ನು ಬೆಳೆಸುವ ಸಲುವಾಗಿ, ಅರಿವಿಗಾಗಿ ನಿರಂತರ ದುಡಿತದ ಮಧ್ಯೆ ದೊರಕುವ ಕಿಂಚಿತ್ ಮನೋರಂಜನೆ ಮಡುಗಟ್ಟಿದ ಮನಕ್ಕೆ ಮುದ ದೊರಕಿಸುತ್ತದೆಯಲ್ಲವೆ. ಸಭೆ ಸಮಾರಂಭಗಳ ಉದ್ದೇಶವೂ ಅದೇ ಅಲ್ಲವೆ.

ದಯವಿಟ್ಟು ಬಾಂಧವರಲ್ಲಿ ಕೇಳಿಕೊಳ್ಳುತ್ತೇನೆ. ಬದಲಾವಣೆಗೊಳಪಟ್ಟ ಈ ಆಧುನಿಕ ಸಮಾಜದಲ್ಲಿ ತಕ್ಕವಾಗಿ ವರ್ತಿಸಿ ಜನಾಂಗದ ಗೌರವ ಕಾಪಾಡಿ, ಮನೆತನದ ಗೌರವಕ್ಕೆ ಧಕ್ಕೆ ತರಬೇಡಿ. ಇತರರು ತಮ್ಮ ಬಗ್ಗೆ ಹಗುರವಾಗಿ ಆಡಿಕೊಳ್ಳುವಂತವರಾಗಬೇಡಿ. ಸಮಾಜದಲ್ಲಿ ಘನತೆಗೆ ತಕ್ಕಂತೆ ವರ್ತಿಸಿದಾಗ ಗೌರವಾಭಿಮಾನಗಳು ನಿಮ್ಮನ್ನರಸಿ ಬರುವುದರಲ್ಲಿ ಸಂದೇಹವೇ ಇಲ್ಲ.

ಎಲ್ಲಿ ಗೌರವಾಭಿಮಾನಗಳ ವಿನಿಮಯವಿದೆಯೋ ಅಲ್ಲ ನಿರಂತರ ಸುಖ ಸಂತೋಷ ವಿರುತ್ತದೆ.

● **ಧನು ಚೆರಿಯಮನೆ ಉಲ್ಲಾಸ್**
ಬಿ.ಎಸ್ಸಿ., ಎಂ.ಎ. ಪತ್ರಿಕೋದ್ಯಮ,
**ಫ್ರಿ ಲ್ಯಾನ್ಸರ್ ದೂರದರ್ಶನ, ಬೆಂ.**
**ವಿಳಾಸ** : ನಂ 638, ಎರಡನೇ ಹಂತ, ಎರಡನೇ ಮೇನ್, 'ಎನ್' ಬ್ಲಾಕ್, ಕುವೆಂಪುನಗರ, ಮೈಸೂರು–570 023.

## ವಿಶ್ವ ಕಪ್ ಕ್ರಿಕೆಟ್

ಬಂದರು ಮೈದಾನಕ್ಕೆ ಮದಗಜಗಳ ತರದಿ
ಅಭಿಮಾನಿಗಳಬ್ಬರದ ಕೂಗಿನ ಮಧ್ಯದಲಿ ॥
ಡ್ರಮ್ ಬಡಿದುಕೊಂಡವು ಸಿಡಿಲಿನ ತರದಿ
ಆಸ್ಟ್ರೇಲಿಯಾ, ಭಾರತ, ಬಂದವು ಸಾಗಿ ॥
ಶುರುವಾಯಿತು ಪಂದ್ಯ ಭೀಕರ ಕಾಳಗದಂತೆ
ಮೈದಾನದ ಒಳಹೊರಗೆ ಜನರ ಸಂತೆ ॥
ಆಸ್ಟ್ರೇಲಿಯಾ ಭಾರತವು ಆಡಿದರು
ಎರಡು ಕಡೆಯಲಿ ಅತಿರಥ ಮಹಾರಥರು ॥
ಬರಲಿಲ್ಲ ಒಂದು 'ಸಿಕ್ಸ್' ಪೂರ್ಣಾವಧಿಯಲಿ
ಪಂದ್ಯದ ನಿರ್ಣಯ ಹೆಚ್ಚಿನ ಅವಧಿಯಲಿ ॥
ಜನರ ಕುತೂಹಲ ತಣಿಯಲಿಲ್ಲ
ತಂಡಗಳೆರಡೂ ಮಣಿಯಲಿಲ್ಲ ॥
ಕಳೆಗುಂದಿತು ಜನರ ಮುಖ ಬೇಸರದಲಿ
ಪಂದ್ಯದ ಆ ಕೊನೆಯ ಹಂತದಲಿ ॥
ಆಯಿತು ಆಸ್ಟ್ರೇಲಿಯಾದ ಮುಖ ಕಪ್ಪು
ಭಾರತಕ್ಕೆ ದೊರೆಯಿತು ವಿಶ್ವಕಪ್ಪು ॥
ಭಾರತಕ್ಕೆ ಸಿಕ್ಕಿತು ಚಿನ್ನದ ಚೆಂಡು
ನಡೆಯಿತು ಮನೆಗೆ ಆಸ್ಟ್ರೇಲಿಯಾ ದಂಡು ॥

● **ಕಡಂಬಳ ಮಾಸ್ಟರ್ ಮೋಹನ್**, ಗಾಳಿಬೀಡು.

## : ನುಡಿ ಮುತ್ತು :

1. ಅಹಂಕಾರವೆಂಬುದು ಬೆಳೆಯುವ ಗಿಡಕ್ಕೆ ಹತ್ತುವ ರೋಗ.
2. ಪರಸ್ಪರ ನೇರ ಸಂಪರ್ಕವೇ ತಪ್ಪು ಕಲ್ಪನೆಗಳಿಗೆ ಕಾರಣ.
3. ನಾವು ಪ್ರೀತಿಸುವುದೆಲ್ಲವೂ ನಮಗೆ ಸುಂದರವಾಗಿಯೇ ಇರುತ್ತದೆ.
4. ಶಿಷ್ಯನಾಗಿ ಬಾಳಲರಿಯದವನು, ತಾನು ಗುರುವೆಂದಾದಾನು.
5. ತನ್ನನ್ನು ತಾನು ಆಳಲು ಕಲಿತವನು ಇತರರನ್ನು ಆಳಬಲ್ಲನು.
6. ಉಪಕಾರವನ್ನು ಮರೆಯುವುದು ನೀಚತನ. ಅಪಕಾರವನ್ನು ಮರೆಯುವುದು ಉತ್ತಮ ಲಕ್ಷಣ.
7. ಕಾಲವೇ ಎಲ್ಲರಿಗಿಂತ ಉತ್ತಮ ಉಪದೇಶಕ.
8. ಅನುಮಾನಕ್ಕೆ ಅಲ್ಪ ಜ್ಞಾನವೇ ಕಾರಣ.
9. ಸ್ತ್ರೀಯನ್ನು ಅವಳ ಸೌಂದರ್ಯಕ್ಕಾಗಿ, ಪುರುಷರನ್ನು ಅವರ ಶ್ರೀಮಂತಿಕೆಗಾಗಿ, ಮಾತ್ರ ಪ್ರೀತಿಸಬಾರದು. ಏಕೆಂದರೆ ಅವೆರಡೂ ಸ್ಥಿರವಲ್ಲ.
10. ಬುಟ್ಟಿಯಷ್ಟು ಬುದ್ಧಿಗಿಂತ ಮುಷ್ಠಿಯಷ್ಟು ತಾಳ್ಮೆ ಲೇಸು.

ಸಂಗ್ರಹ ; **ಕಾಕೇರ ಸತೀಶ್ ಆನಂದ**

ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ

# 1837ರ ಸ್ವಾತಂತ್ರ್ಯ ಸಂಗ್ರಾಮ

## ಪ್ರಸ್ತಾವನೆ

**ಭಾ**ರತದ ಸ್ವಾತಂತ್ರ್ಯ ಸಂಗ್ರಾಮವು ಅಧಿಕೃತವಾಗಿ 1857 ರಿಂದ 1947ರ ವರೆಗೆ ಬೇರೆ ಬೇರೆ ಕಾಲದಲ್ಲಿ ವಿವಿಧ ಹಂತಗಳಲ್ಲಿ ನಡೆಯಿತೆಂಬ ಸಂಗತಿ ಸರ್ವ ವೇದ್ಯ. ಆದರೆ 1857 ಕ್ಕಿಂತ ಮೊದಲೇ ಭಾರತದ ಹಲವಾರು ಕಡೆಗಳಲ್ಲಿ ಬ್ರಿಟೀಷರ ವಿರುದ್ಧವಾಗಿ ನಡೆದ ಸಂಗ್ರಾಮಗಳು ಹಲವಾರು ಇದ್ದು, ಅವುಗಳನ್ನು ಚರಿತ್ರೆಯಲ್ಲಿ ಉಲ್ಲೇಖಿಸಲು ಇತಿಹಾಸಕಾರರು ಬಿಟ್ಟಿದ್ದಾರೆ. ಅದೇ ರೀತಿ, ಕೊಡಗು ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ನಡೆದ 1837ರ ಸ್ವಾತಂತ್ರ್ಯ ಸಂಗ್ರಾಮದ ಕಥೆಯು ಸ್ಥಿತಿಯಾಗಿದೆ.

ಹತ್ತೊಂಭತ್ತನೇ ಶತಮಾನದ ನಡು ಭಾಗದ ಸುಮಾರಿಗೆ ಭಾರತದಲ್ಲಿ ಬ್ರಿಟೀಷರ ವಿರುದ್ಧ ನಡೆದ ಸಂಗ್ರಾಮ ಭಾರತೀಯ ಚರಿತ್ರೆಯಲ್ಲಿ ಗಮನಿಸಬೇಕಾದ ದಾಖಲೆಯಾಗಿದೆ. ತಕ್ಕಡಿ ಹಿಡಿದು ವ್ಯಾಪಾರಕ್ಕಾಗಿ ಬಂದ ಬ್ರಿಟೀಷರ ದೃಷ್ಟಿಯಲ್ಲಿ, ಆ ಸಂಗ್ರಾಮ, ಕೇವಲ ಸಿಪಾಯಿಗಳ ದಂಗೆ ಎಂದೆನ್ನಿಸಿದರೂ ಭಾರತೀಯರ ದೃಷ್ಟಿಯಲ್ಲಿ ಅದು ಭಾರತದ ಪ್ರಪ್ರಥಮ ಸ್ವಾತಂತ್ರ್ಯ ಸಂಗ್ರಾಮ ಯುದ್ಧವಾಗಿದೆ. ಸಾಮಾನ್ಯವಾಗಿ ಒಂದು ದೇಶದ ಇತಿಹಾಸ, ಬಾಹ್ಯ ಸ್ವರೂಪದಲ್ಲಿ ಕಾಣುವ ಅನೇಕ ಪ್ರಮುಖ ಘಟನೆಗಳ ನೆಲೆಗಟ್ಟಿನ ಮೇಲೆ ಮೂಡಿರುತ್ತದೆ. ಸಾಮಾನ್ಯವಾಗಿ ದಂಗೆ, ಕ್ರಾಂತಿಗಳಾಗುವುದು ಹಲವಾರು ಅತೃಪ್ತ ಘಟನೆಗಳ ಒಟ್ಟು ಮೊತ್ತದಲ್ಲಿ. ಹೀಗಾಗಿ 1857ರ ಸಂಗ್ರಾಮದ ಹಿನ್ನೆಲೆಯಲ್ಲಿ ಬ್ರಿಟೀಷರ ವಿರುದ್ಧ ಆಗಾಗಲೇ ಅನೇಕ ಸಣ್ಣಪುಟ್ಟ ಘರ್ಷಣೆಗಳು ನಡೆದಿರುವುದು ಇತಿಹಾಸದ ಕಟು ಸತ್ಯಗಳಾಗಿವೆ.

ಇಂದು ನಾವು ಸ್ವಾತಂತ್ರ್ಯದ ಫಲವನ್ನು ಅನುಭವಿಸುತ್ತಿರುವುದು ಸೂರ್ಯಸ್ಪಷ್ಟವಾಗಿರುವುದಕ್ಕೆ ಅಸಂಖ್ಯಾತ ಚೇತನಗಳು, ನಾನಾ ಬಗೆಯ ಕಷ್ಟಗಳನ್ನು ಅನುಭವಿಸಿ, ಅಪಮಾನ–ಅತ್ಯಾಚಾರಗಳನ್ನು ಸಹಿಸಿ, ತ್ಯಾಗ–ಬಲಿದಾನಗಳನ್ನು ಮಾಡಿವೆ. ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಷ್ಟೇ ರೋಮಾಂಚಕವೂ, ಕಲ್ಪನೆಯೂ ತತ್ತರಿಸುವಂತಹಾ ಘಟನೆಗಳೂ, 1857ರ ಮುಂಚೆ ಭಾರತದ ಅನೇಕ ಕಡೆಗಳಲ್ಲಿ ನಡೆದಿರುವುದು ಐತಿಹಾಸಿಕ ಸತ್ಯ. ಆದರೆ ಈ ಘರ್ಷಣೆ, ಹೋರಾಟಗಳೆಲ್ಲ ವಿಫಲವಾಗಲು, ಭಾರತ, ತನ್ನದೇ ಆದ ದೌರ್ಬಲ್ಯವನ್ನು ಹೊಂದಿದ್ದುದೇ ಆಗಿದೆ. ದಕ್ಷ ಆಡಳಿತಗಾರನ ಅಭಾವ, ವೈಯಕ್ತಿಕ ಹಿತಾಸಕ್ತಿಗಳ ನಡುವೆ ಎದ್ದ ಗೊಂದಲ, ಸ್ವಾಮಿದ್ರೋಹ, ತನ್ಮೂಲಕ ರಾಜದ್ರೋಹ, ದೇಶದ್ರೋಹಗಳ ಹಾವಳಿಗಳಿಂದ ಸಫಲವಾಗಲಿಲ್ಲ. ಭೇದ ನೀತಿಯಲ್ಲಿ ಸಿದ್ಧಹಸ್ತರಾದ ಬ್ರಿಟೀಷರ ಆಮಿಷಗಳಿಗೆ ಸೋತು ಮಾತೃ ಭೂಮಿಗೆ ದ್ರೋಹ ಬಗೆದವರು ಕೆಲವರಾದರೆ ತಾವೇ ಸಿಂಹಾಸನಸ್ಥರಾಗಬೇಕೆಂದು ದುರಾಸೆಯವರು ಕೆಲವರು ಹುಟ್ಟಿಕೊಂಡು ಸಂಚು–ಪ್ರತಿಸಂಚುಗಳನ್ನು ನಡೆಸುತ್ತಿದ್ದುದರಿಂದ ಭಾರತದ ಒಂದೊಂದೇ ಭಾಗ ಬ್ರಿಟೀಷರ ವಶವಾಗಲು ಕಾರಣವಾಯಿತು. ನಮ್ಮ ಸಂಸ್ಥಾನಾಧಿಪತಿಗಳಲ್ಲಿ ದೇಶೀಯ ರಾಜರುಗಳಲ್ಲಿ, ಪರಸ್ಪರ ವೈಮನಸ್ಯ ಇದ್ದುದನ್ನು ಗಮನಿಸಿದ ಬ್ರಿಟೀಷರು ತಮ್ಮ ಚಕ್ರಾಧಿಪತ್ಯವನ್ನು ಭಾರತದಲ್ಲಿ ಸ್ಥಾಪಿಸಿ ವಿಜೃಂಭಿಸಿದರು. ನಮ್ಮ ನೀತಿ, ಧರ್ಮ, ಸಂಸ್ಕೃತಿಗಳಲ್ಲಿ ಹಾಸು ಹೊಕ್ಕಾಗಿ ಬೆಳೆಯಲು ಹವಣಿಸಿದರು. ನಮ್ಮಲ್ಲಿದ್ದ ಭೇದವನ್ನು ಇನ್ನೂ ದೊಡ್ಡದು ಮಾಡಿ, ತಮ್ಮ ಕಾರ್ಯ ಸಾಧಿಸಿಕೊಂಡರು. ಅವರ ಈ ಕಾರ್ಯ ಯಶಸ್ವಿಯಾಗಲು ಭಾರತದ ದೇಶದ್ರೋಹಿಗಳು ನೆರವಾದರು. ಅನೇಕ ದೇಶಭಕ್ತರು ನಾಡನ್ನುಳಿಸಲು ಬ್ರಿಟೀಷರ ವಿರುದ್ಧವಾಗಿ ಪ್ರಭಲವಾದ ಹೋರಾಟವನ್ನೇ ನಡೆಸಿದರೂ ಸಫಲವಾಗಲಿಲ್ಲ. ಹೀಗೆ ನಡೆದ ಹೋರಾಟಗಳಲ್ಲಿ ಕೊಡಗು, ದಕ್ಷಿಣ ಕನ್ನಡ ಜಿಲ್ಲೆಗಳ ಪಾತ್ರ ಗಮನೀಯ.

## ಪ್ರಾಕೃತಿಕ ಸನ್ನಿವೇಶ :

### ಕೊಡಗು ಜಿಲ್ಲೆ

'ಇರೋದ್ರೊಳ್ಗೆ ಒಮ್ಮೆ ನೋಡು ಜೋಗದ ಗುಂಡಿ' ಎಂಬಂತೆ ಹುಟ್ಟಿದವರು ಒಮ್ಮೆಯಾದರೂ ನೋಡಲೇಬೇಕಾದ ನಾಡು–ಕೊಡಗು.

ಕೊಡಗು ಜಿಲ್ಲೆಯು ಕರ್ನಾಟಕದ ಪಶ್ಚಿಮ ಘಟ್ಟದಿಂದ ಪೂರ್ವಕ್ಕೆ ಹರಿಯುವ ಹೇಮಾವತಿ ನದಿಯಿಂದ ಲಕ್ಷ್ಮಣತೀರ್ಥ ನದಿಯವರೆಗೆ ಹರಡಿ ಅವೆರಡು ನದಿಗಳಿರುವ ಪ್ರದೇಶದ ಮಧ್ಯ ಭಾಗದಲ್ಲಿ ಕಾವೇರಿ ನದಿಯು ಹರಿಯುತ್ತಿದ್ದು 60 ಮೈಲು ಉದ್ದ 40 ಮೈಲು ಅಗಲದ ಮಾಲಂಬಿ, ಪುಷ್ಪಗಿರಿ, ಬ್ರಹ್ಮಗಿರಿ, ತಡಿಯಂಡಮೋಳು ಮುಂತಾದ ಬೆಟ್ಟಗಳ ಸಾಲಿನಿಂದ ಕೂಡಿದ ಪಶ್ಚಿಮ ಘಟ್ಟ ಪೀಠ ಭೂಮಿಯಲ್ಲೂ ಹಾಗೂ ಪೂರ್ವದ ಕಡೆ ಇಳಿಜಾರಾದಲ್ಲಿ ಬಯಲು ಸೀಮೆಯಿಂದ ಕೂಡಿದ ನಾಡಾಗಿದ್ದು ಇಲ್ಲಿ ಯಥೇಚ್ಛವಾದ ಬೆಲೆ ಬಾಳುವ ಮರಗಳಿಂದ

ಕೂಡಿದ ಸುಂದರ ನಾಡಾಗಿದೆ. ಆದ್ದರಿಂದಲೇ ಕನ್ನಡದ ಆಚಾರ್ಯರಾದ ದಿ|| ಡಾ|| ಡಿ. ವಿ. ಗುಂಡಪ್ಪನವರು "ನಡೆದು ನೋಡು ಕೊಡಗಿನ ಬೆಡಗ" ಎಂದು ಕೊಡಗಿನ ಪ್ರಕೃತಿ ಶ್ರೀಯ ಬಗ್ಗೆ ಪ್ರಶಂಸೆ ಮಾಡಿ ಕೊಡಗು ನಾಡಿನ ಪ್ರಾಮುಖ್ಯತೆಯನ್ನು ಕೊಂಡಾಡಿದ್ದಾರೆ. ಕೊಡಗನ್ನು ಕೆಲವರು "ದಕ್ಷಿಣ ಕಾಶ್ಮೀರ" ವೆಂದೂ ಕರೆದಿದ್ದಾರೆ. ಈ ಜಿಲ್ಲೆಯಲ್ಲಿ ವರ್ಷಕ್ಕೆ 40 ರಿಂದ 230ಇಂಚುಗಳಷ್ಟು ಮಳೆ ಬೀಳುವ ಪ್ರದೇಶಗಳಿದ್ದು ಯಾಲಕ್ಕಿ, ಕಿತ್ತಳೆ, ಕಾಫಿ, ಕರಿ ಮೆಣಸು ಬೆಳೆಗಳಿಗೆ ಪ್ರಸಿದ್ಧಿಯಾಗಿದೆ. ಇಲ್ಲಿ ಸಿಗುವ ಜೇನುತುಪ್ಪ ಶ್ರೇಷ್ಠ ಮಟ್ಟದ್ದೆಂದು ಹೆಸರುವಾಸಿಯಾಗಿದೆ. ಈ ಜಿಲ್ಲೆಯು ಅನೇಕ ಪರಾಕ್ರಮಿ ಸೇನಾನಿಗಳನ್ನು ಕಾಣಿಕೆಯಾಗಿ ಕೊಟ್ಟಿದೆ. ಇಲ್ಲಿನ ಜನರ ಸಂಸ್ಕೃತಿ, ಸಾಮಾಜಿಕ ಜೀವನವೂ ವಿಶಿಷ್ಟ ರೀತಿಯದ್ದಾಗಿದೆ.

## ದಕ್ಷಿಣ ಕನ್ನಡ ಜಿಲ್ಲೆ

ಬ್ರಿಟೀಷರು ಕೊಡಗನ್ನು ವಶಪಡಿಸಿಕೊಂಡ ನಂತರ 1834ರಲ್ಲಿ ಕೊಡಗು ಸಂಸ್ಥಾನದಿಂದ ದಕ್ಷಿಣ ಕನ್ನಡ ಜಿಲ್ಲೆಯನ್ನು ಬೇರ್ಪಡಿಸಲ್ಪಟ್ಟು, ದಕ್ಷಿಣ ಕನ್ನಡ ಜಿಲ್ಲೆಯನ್ನು ಮದ್ರಾಸು ಪ್ರಾಂತ್ಯಕ್ಕೆ ಸೇರಿಸುವುದಕ್ಕೆ ಮೊದಲು, ಈ ಜಿಲ್ಲೆಯನ್ನು ತುಳುನಾಡೆಂದು ಕರೆಯುತ್ತಿದ್ದರು. ದಿವಂಗತ ಡಾ|| ಪಿ. ಗುರುರಾಜ ಭಟ್ಟರ ಅಭಿಪ್ರಾಯದಂತೆ "ತುಳುನಾಡು" ಎಂಬ ಹೆಸರು ಬರುವುದಕ್ಕೆ ತರುಗಳನ್ನು [ಪಶುಗಳನ್ನು] ಹೊಂದಿದವರು ಅವುಗಳನ್ನು ಸಾಕಿರುವವರು ತುರುಕಾರರು [ತುರುವರು] ಅವರೆ ತುಳವರೆಂದು ಹೆಸರು ಪಡೆದರೆಂದು ಅವರು ವಾಸವಿದ್ದ

**ಪೂಜಾರಿ ನೊಣ್ಣಪ್ಪ**, ವಕೀಲರು, ಬೆಂಗಳೂರು.

ಸ್ಥಳಕ್ಕೆ "ಹಾಡಿ" "ಪಾಡಿ" ಎಂದು ಹೆಸರು ಬಂತೆಂದೂ ಆದುದರಿಂದಲೇ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹಲವಾರು ಗ್ರಾಮಗಳಿಗೆ ಕೆದಂಬಾಡಿ, ಘೋಲ್‌ಪಾಡಿ, ಅಂಗಾಡಿ, ಮಡಂಪಾಡಿ, ಬಂಗವಾಡಿ, ಕಾಸ್ಪಾಡಿ,ಬೆಳ್ಳಿಪಾಡಿ, ಚೊಕ್ಕಾಡಿ, ಮುಂಡೋಡಿ, ಅತ್ತಿಯಾಡಿ, ಸುಳ್ಳೆಕೋಡಿ, ಬಂಟ್ವಾಡಿ, ದೇಸ್ಕೋಡಿ, ನಿಡುಂಪಾಡಿ, ಎಂಬುದಾಗಿ ಹೆಸರು ಬಂದಿವೆ ಎಂದೂ ಹೇಳುತ್ತಾರೆ. ಆದುದರಿಂದಲೇ ಹಾಲೇರಿ ವಂಶದ ಕೊಡಗಿನ ರಾಜರ ಕಾಲದಲ್ಲಿ ಸುಳ್ಯ ತಾಲ್ಲೋಕನ್ನು ಅಮೃತ ಸುಳ್ಯವೆಂದು ಕರೆದದ್ದು ಅಮರ ಸುಳ್ಯವಾಯಿತು ಎಂದು ಹೇಳಬಹುದು. ಅಮೃತ ಎಂದರೆ ಯಥೇಚ್ಛವಾಗಿ ಹಾಲು ಬೆಣ್ಣೆಯನ್ನು ಉತ್ಪಾದಿಸುವ ನಾಡೆಂದು ಅರ್ಥ.

ದಕ್ಷಿಣ ಕನ್ನಡ ಜಿಲ್ಲೆಯು ದಕ್ಷಿಣದಲ್ಲಿ ಕೇರಳ ರಾಜ್ಯದ, ಉತ್ತರದಲ್ಲಿ ಉತ್ತರ ಕನ್ನಡ ಹಾಗೂ ಶಿವಮೊಗ್ಗೆ ಜಿಲ್ಲೆಗಳು, ಪೂರ್ವಕ್ಕೆ ಕೊಡಗು ಮತ್ತು ಚಿಕ್ಕಮಗಳೂರು ಜಿಲ್ಲೆಗಳು ಪಶ್ಚಿಮಕ್ಕೆ ಅರಬ್ಬೀ ಸಮುದ್ರಗಳ ಮೇರೆಗಳಿಂದ ಕೂಡಿದೆ. ಮಲೆನಾಡಿನ ಹಸುರಿನ ಚೆಲುವೂ ಕಡಲತಡಿಯ ಬೆಡಗೂ ಮೈಗೂಡಿದಂತಿರುವ ದಕ್ಷಿಣ ಕನ್ನಡದ ಸೊಬಗು ರಮಣೀಯವಾಗಿದೆ. ಕವಿವರ ರವೀಂದ್ರ ಠಾಕೂರರು ಈ ನಾಡನ್ನು ಅಡ್ಡಹಾದು ಹೋಗುವಾಗ ಶಚೀ ದೇವಿಯ ಅಂತಃಪುರವೆಂದು ಕೊಂಡಾಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯೆಂಬ ಹೆಣ್ಣಿಗೆ ತೊಡಿಸಿದ ಮುತ್ತಿನ ಹಾರವೋ ಎಂಬಂತೆ ಜಿಲ್ಲೆಯ ನೇತ್ರಾವತಿ ನದಿಯು ಪಶ್ಚಿಮ ಘಟ್ಟಗಳಿಂದ ಧುಮುಕಿ ಅರಬ್ಬೀ ಸಮುದ್ರವನ್ನು ಸೇರುತ್ತದೆ. ಜಿಲ್ಲೆಗೆ ಆಗಮಿಸುವವರನ್ನು ಸತ್ಕರಿಸುವುದಕ್ಕಾಗಿ ಕೈ ಬೀಸಿ ಆಹ್ವಾನಿಸುತ್ತವೆಯೋ ಎಂಬಂತೆ ಎಲ್ಲೆಲ್ಲಿ ನೋಡಿದರೂ ಬಾಳೆ, ಅಡಿಕೆ ಮತ್ತು ತೆಂಗಿನಮರಗಳ ತೋಟಗಳು ಕಣ್ಣಿಗೆ ಆನಂದವನ್ನು ತರುತ್ತವೆ. ಇವೂ ಅಲ್ಲದೆ ಗೇರುಬೀಜ ಕರಿಮೆಣಸು, ರಬ್ಬರು, ಹೊಗೆಸೊಪ್ಪು ಇಲ್ಲಿನ ಜನರಿಗೆ ಹಣವನ್ನು ಕೊಡುವ ಮುಖ್ಯ ಬೆಳೆಗಳಾಗಿವೆ.

ಸರ್ವಧರ್ಮಗಳ ಸಮನ್ವಯ ಕ್ಷೇತ್ರವೆಂದು ಹೆಸರುವಾಸಿಯಾದ ಧರ್ಮಸ್ಥಳವೂ, ಉಡುಪಿ, ಸುಬ್ರಮಣ್ಯಗಳಂತಹ ಪುಣ್ಯಕ್ಷೇತ್ರಗಳೂ ಕಾರ್ಕಳ, ಮೂಡಬಿದ್ರೆಯಂತಹ ವಾಸ್ತುಶಿಲ್ಪಕ್ಕೆ ಹೆಸರಾದ ಪುಣ್ಯಕ್ಷೇತ್ರಗಳೂ, ಮಂಗಳೂರಿನಂತಹ ಕರ್ನಾಟಕದ ದೊಡ್ಡ ಬಂದರಾಗಿರುವ ಬಂದರು ಸ್ಥಳವೂ, ವಿದ್ಯಾಮಂದಿರಗಳ ಹಾಗೂ ಬ್ಯಾಂಕ್ ಉದ್ಯಮಗಳ ತವರೂರೆನಿಸಿದ ಉಡುಪಿ ನಗರವೂ ಈ ಜಿಲ್ಲೆಯಲ್ಲಿವೆ.

ಅದೂ ಅಲ್ಲದೆ ಖ್ಯಾತ ಕವಿಗಳೆನಿಸಿದ ರಾಷ್ಟ್ರಕವಿ ಮಂಜೇಶ್ವರ ಗೋವಿಂದ ಪೈಗಳೂ, ಯಕ್ಷಗಾನ ಪಂಡಿತರೂ, ಖ್ಯಾತಿವೆತ್ತ ಸಾಹಿತಿಗಳೂ ಆದ ಡಾ || ಶಿವರಾಮಕಾರಂತರೂ ಈ ನಾಡಿನವರಾಗಿದ್ದಾರೆ. ಯಕ್ಷಗಾನ ಕಲೆಯನ್ನು ಭಾರತದಲ್ಲೇ ಅಲ್ಲದೆ, ಹೊರದೇಶಗಳಲ್ಲೂ ಪ್ರದರ್ಶಿಸಿ ಭಾರತೀಯ ಕಲೆ ಮತ್ತು ಸಂಸ್ಕೃತಿಯ ಸಂಪತ್ತನ್ನು ಹೆಚ್ಚಿಸಲು ಸಹಾಯಕವಾಗಿದೆ ಈ ನಾಡು.

[ಮುಂದಿನ ಸಂಚಿಕೆ ನೋಡಿ]

## : ನಗೆ ಹನಿ :

ತಾಯಿ : ಅಳಬೇಡಮ್ಮ ಅಳಬೇಡ. ಹೊಸದಾಗಿ ಗಂಡನ ಮನೆಗೆ ಹೋಗಬೇಕಾದ್ರೆ ದುಃಖ ಆಗುತ್ತೆ ನೋಡು, ನಾನೂ ನಿಮ್ಮಪ್ಪನ ಹಿಂದೆ ಬರಲಿಲ್ವಾ ? ಆಗ ನನಗೂ ದುಃಖ ಆಗಿತ್ತಾ.

ಮಗಳು : [ಅಳುತಾ] ನೀನೇನೋ ಅಪ್ಪನ ಹಿಂದೆ ಬಂದೆ. ಆದರೆ ನಾನು ಅಪರಿಚಿತನ ಹಿಂದೆ ಹೋಗಬೇಕಲ್ಲ !

● **ವಿ. ಪವನ್**, ಮೈಸೂರು

# ನಿಮ್ಮ ಪತ್ರಗಳು

**ಶ್ಲಾಘನೀಯ**

ಮಾನ್ಯರೇ,

"ಕೊಡಗು ಸಂಗಾತಿ"ಯ ಪ್ರತೀ ಸಂಚಿಕೆಯು ಚೆನ್ನಾಗಿ ಮೂಡಿ ಬರುತ್ತಿದೆ. ಉಪಯುಕ್ತ ಲೇಖನಗಳನ್ನು ಪ್ರಕಟಿಸುತ್ತಿರುವ ನಿಮ್ಮ ಸಾಧನೆ ಶ್ಲಾಘನೀಯ ಮತ್ತು ಅಭಿನಂದನಾರ್ಹ.

○ **ನೂಜಿ ದಿನಕರ ಗೌಡ,** ಕಾರ್ಯದರ್ಶಿ
ಕೊಡಗು ಮತ್ತು ದ.ಕ. ಗೌಡಸಮಾಜ, ಬೆಂಗಳೂರು

**ಸಹಕರಿಸುವೆ**

ಮಾನ್ಯರೇ,

ನೀವ್ ಕಳ್ಸುನ "ಕೊಡಗು ಸಂಗಾತಿ" ನಮ್ಮ ಕೈ ಸೇರ್‍ತ್ ಉಟ್ಟ್. ಈ ಪತ್ರಿಕೆ ಯಶಸ್ವಿಯಾಕುತೇಳಿ ನಾವು ನಿಮ್ಮೊಟ್ಟಿಗೆ ಸಹಕರಿಸುವೆ. ಇದ್ ಕಾವೇರಿ ಹೊಳೆ ಹರ್‍ದಂಗೆ ಇದರ ಪ್ರಸಾರ ಹಬ್ಬಲಿತೇಳಿ ನಾವ್ ದೇವರಲ್ಲಿ ಪ್ರಾರ್ಥಿಸುವೆ.

○ **ಬಿರುಮಣನ ಕೆ. ಪ್ರವೀಣ್**
**ಬೈನೆರವನ ಸಿ. ಪರಸು,** ಮಡೆ.

**ಪೂರಕವಾಗಲಿ**

ಮಾನ್ಯರೇ,

"ಕೊಡಗು ಸಂಗಾತಿ" ಬಹಳ ಉತ್ತಮ ಮಟ್ಟದಲ್ಲಿ ಮೂಡಿ ಬರುತ್ತಿದೆ. ಈ ಪತ್ರಿಕೆ ಕೊಡಗಿಗೆ ಮಾತ್ರ ಸೀಮಿತವಾಗಿರದೆ ದ.ಕ. ಜಿಲ್ಲೆಗೂ ಅನ್ವಯಿಸಲಿ. ನಾವೆಲ್ಲರೂ ಒಂದೇ ಬುಡಕಟ್ಟಿಗೆ ಸೇರಿದವರಾಗಿರುವುದರಿಂದ ಈ ಪತ್ರಿಕೆಯು ಕೊಡಗು ಮತ್ತು ದ.ಕ. ಗೌಡ ಸಂಘಟನೆಗೆ ಪೂರಕವಾಗಿರಲಿ.

○ **ಪಿ. ಅನಂತರಾಜಗೌಡ,** ಬೆಂಗಳೂರು.

**ಛಲಕ್ಕೆ ತಲೆಬಾಗುತ್ತೇನೆ**

ಮಾನ್ಯರೇ,

ಕೊಡಗಿನ ಗೌಡ ಜನಾಂಗದ ಮೇಲೆ ಅಭಿಮಾನವಿರುವ ತಾವು "ಕೊಡಗು ಸಂಸಾತಿ" ಪತ್ರಿಕೆಯನ್ನು ಹೊರತಂದ ನಿಮ್ಮ ಛಲಕ್ಕೆ ನಾನು ತಲೆ ಬಾಗುತ್ತೇನೆ. ಎಂತಹ ಸಂದರ್ಭದಲ್ಲೂ ನೀವು ಮುಂದಿಟ್ಟ ಹೆಜ್ಜೆ ಹಿಂದಿಡಬೇಡಿ. ಜಿಲ್ಲೆಯಲ್ಲಿ ಜನಾಂಗದ ಸಂಘಟನೆಗೆ ಹೆಚ್ಚಿನ ಒತ್ತು ನೀಡಿ. ನನ್ನ ಜನಾಂಗಕ್ಕಾಗಿ ಏನಾದರು ಅಳಿಲು ಸೇವೆ ಮಾಡಬೇಕೆಂಬ ಬಯಕೆ ನನಗಿದೆ. ಪತ್ರಿಕೆಗಾಗಿ ನನ್ನ ಸಹಾಯ ಇದ್ದೇ ಇದೆ. ಕೊಡಗಿನ ಮೂಲೆ ಮೂಲೆಗಳಲ್ಲಿ ಪತ್ರಿಕೆಯು ಸಂಚರಿಸಿ ಕೇವಲ ಜನಾಂಗದ ಮಾತ್ರವಲ್ಲದೆ ಕೊಡಗಿನ ಸಮಸ್ತ ಜನತೆಯ ಪ್ರೀತಿ, ವಿಶ್ವಾಸಗಳಿಸಲಿ.

○ **ಕೋಡಿ ಚಂದ್ರಶೇಖರ್,** ಮಡಿಕೇರಿ

**ನಂಬಿಕೆ ಉಟ್ಟ್**

ಮಾನ್ಯರೆ,

ಕೊಡಗು ಸಂಗಾತಿ ಪತ್ರಿಕೆ ಓದಿ ತುಂಬಾ ಖುಶಿ ಆತ್. ಅದರ್‍ಲಿ ಒಳ್ಳೊಳ್ಳೆ ವಿಚಾರಗ ಲಾಯ್ಕ ಮೂಡಿ ಬರ್‍ತುಟ್ಟ್. ಈಗ ಸುರ್‍ ಅಷ್ಟೆ. ಇನ್ನಿನ್‍ನ್ನ ಲಾಯ್ಕ ಮೂಡಿ ಬಂದದೆತೇಳಿ ನಮಗೆ ನಂಬಿಕೆ ಉಟ್ಟ್.

**ಮಳ್ಳಂದಿರ ಲಲಿತ ಶೇಷಗಿರಿ**
ಮರಗೋಡು.

**ಕೇಳಿಕೊಮ್ಮನೋ**

ಮಾನ್ಯರೆ,

ಪತ್ರಿಕೆಯಲ್ಲಿರುವ ಅರೆಭಾಷೆ ವಿಭಾಗ ಓದಿಕೆ ತುಂಬಾ ಖುಷಿಯಾಗುತ್ತುಟ್ಟ್. ಅರೆಭಾಷೆಗೆ ಇನ್ನೂ ಎರ್‍ಡ್ ಪುಟ ಇಟ್ಟರೆ ಒಳ್ಳೆದಿತ್. ನಮ್ಮ ಅರೆಭಾಷೆನ ಉಳ್ಸಿ ಬೆಳ್ಸುದು ಗೌಡ ಜನಾಂಗದ ಮುಖ್ಯ ಉದ್ದೇಶ. ಜೋಯಪಣ್ಣನಂತಹ ಸ್ಥಿರ ಲೇಖಕರ್ ಇನ್ನೂ ಹುಟ್ಟಿಬರಲಿತೇಳಿ ಕುಲದೇವ್ರು ವೆಂಕಟರಮಣ ಸ್ವಾಮಿನ ಕೇಳಿಕೊಮ್ಮನೊ.

**ಕೋಳುಮುಡಿಯನ ಪ್ರೇಮ ಅನಂತಕುಮಾರ್**
ಗಾಳಿಬೀಡು.

**ಖಂಡಿತ ಸಾಧ್ಯ**

ಮಾನ್ಯರೆ,

ಮೊನ್ನೆ ಬೇಸಿಗೆ ರಜೆಯಲ್ಲಿ ಕೊಡಗಿಗೆ ಹೋದಾಗ ಮನೆ ಮನೆಯಲ್ಲೂ "ಕೊಡಗು ಸಂಗಾತಿ" ಪತ್ರಿಕೆ ನೋಡಿ ಆಶ್ಚರ್ಯವೂ, ಸಂತೋಷವೂ ಏಕಕಾಲದಲ್ಲಿ ಉಂಟಾಯಿತು. ನಿಮ್ಮ ಈ ಪ್ರಯತ್ನದಿಂದ ನಮ್ಮಲ್ಲಿರುವ ಯುವ ಪ್ರತಿಭೆಗಳನ್ನು ಗುರುತಿಸಲು ಹಾಗೂ ಬೆಳೆಸಲು ಖಂಡಿತಾ ಸಾಧ್ಯ. ಈ ಶ್ಲಾಘನೀಯ ಸಾಹಸಕ್ಕೆ ಪೂರ್ಣ ಯಶಸ್ಸು ಸಿಗಲೆಂದು ನಮ್ಮ ತುಂಬು ಮನದ ಹಾರೈಕೆ.

ಶುಭಾಶಯಗಳೊಂದಿಗೆ,

**ನಡುವಟ್ಟಿರ ಲಕ್ಷ್ಮಣ್**
**ನಡುವಟ್ಟಿರ ಗಾಯಿತ್ರಿ ಲಕ್ಷ್ಮಣ್**
ಹೊಳೆನರಸೀಪುರ.

## ಅರೆಭಾಷಿಕರ ವಿಭಾಗ

# ರಾಜು ಕಂಡ ಪಿಶಾಚಿ

ರಾಜು ಯಾಗೋಳು ಕತ್ತಲಾದ ಮ್ಯಾಲೆ ಎಲ್ಲಿಗೂ ಹೋಗುವವ ಅಲ್ಲ. ಎಲ್ಲಿಗಾರ್ ಹೋಕಿದ್ದರೆ ಕತ್ತಲಾಕೆ ಮುಂಚೆನೇ ಬಂದ್ ಮನೆ ಸೇರಿಕಂಡದೆ. ಯಾಕೆಂತ ಹೇಳ್ರೆ ಅವಂಗೆ ಬಾರೀ ಹೆದ್ರಿಕೆ.

ಮೊನ್ನೆ ಒಂದಿನ ಅದೆಲ್ಲಿಗೋ ಹೋದ ರಾಜು ಬಾಕನ ದಾರಿಲಿ ಬಸ್ಸ್ ರಿಪೇರಿ ಆಗಿ ಸ್ವಲ್ಪ ಹೊತ್ತಾಗಿಬುಡ್ತ್. ಬಸ್ಸ್ ಇಳ್ದ್ ಅವನ ಮನೆಗೆ ಹೋಕೊರೆ ಸುಮಾರ್ ಮೂರು ಕಿಲೋಮೀಟರ್‌ನಷ್ಟ್ ನಡಿಯೋಕು. ಅಂದ್ ತಿಂಗಳ ಬೆಳ್ಕ್ ಕೂಡಾ ಹೌದಾ ಅಲ್ಲಾತ್ ಒಂಚೂರು ಇತ್ತಷ್ಟೆ. ಒಬ್ಬನೇ ಆದರೂ ಬ್ಯಾರೆ ದಾರಿನೇ ಇಲ್ಲದೆ ದೇವರ ಮ್ಯಾಲೆ ಬಾರ ಹಾಕಿ ಆಚೆ ಈಚೆ ನೋಡದೇ ಸೀದಾ ಬರ್ತಾ ಉಟ್ಟ್.

ಅದೇ ದಿನ ರಾಮಯ್ಯ ಗಂಟ್ಲ್‌ಮುಟ್ಟ ಕುಡ್‌ಕಂಡ್ ಟೈಟ್ಟಾಗಿ ಓಲಾಡಿಕಂಡ್ ಇತ್ತಂದ ರಸ್ತೆ ಕರೆಲಿರುವ ಅವನ ಮನೆ ಕಡೆ ಹೋಗ್‌ತ್‌ಟ್ಟು. ಅಂದ್ ಸಂಬಳದ ದಿನ ಆದ್ದ್‌ರಿಂದಾಗಿ ಅಂವ ಸ್ವಲ್ಪ ಜಾಸ್ತಿನೇ ಕುಡ್‌ದುಟ್ಟು. ಸರಿಯಾಗಿ ನಡಿಯಕ್ಕಾಗದೇ ಅಂವ ಎಡ್‌ಗಿಕಂಡ್ ಬಿದ್ದ್‌ಕಂಡ್ ಮತ್ತೆ ಎದ್ದ್‌ಕಂಡ್ ಬರ್‌ತಾ ಉಟ್ಟು.

ಒಂದ್ ವಾರಕ್ಕೆ ಮುಂದೆ ಅಲ್ಲೇ ದಾರಿ ಬದಿಲಿ ಇರುವ ಮನೆಲಿ ತಿಮ್ಮಯ್ಯಜ್ಜ ಸತ್ತದ್. ಅವರ ಕುಟುಂಬ ಎಲ್ಲೋ ಕನ್ನಡ ಜಿಲ್ಲೆಲಿಗಡ. ಅದ್ದರ್‌ಂದಾಗಿ ಅವುಕೆ ಬ್ಯಾರೆ ಚೂಟ್‌ಕಳ [ಸ್ಮಶಾನ] ಇಲ್ಲೆ. ಹೆಣನ ಅವರ ಮಕ್ಕ ಅವರ ಜಾಗಲೇ ಸುಟ್ಟದ್. ಆ ಗೋರಿ ದಾರಿಗೇ ಕಂಡದೆ. ದಾರಿ ಬದಿಲಿ ಸುಡ್‌ಬಡಿತ ಎಷ್ಟೋ ಜನ ಹೇಳ್ದೊಗಡ. ಆದ್ರೂ ಅವು ಕೇಳ್ತ್‌ಲೆ.

ರಾಜು ಬಂದ್ ಬಂದ್ ತಿಮ್ಮಯ್ಯಜ್ಜನ ಗೋರಿ ಹತ್ರ ಬಾತ್. ಗೋರಿಗೆ ಸ್ವಲ್ಪ ಈಚೆವರೆಗೆ ಹೋಗಿ ಅಲ್ಲಿ ನಿತ್ತ್ ಸ್ವಲ್ಪ ಆಚೆ ಈಚೆ ನೋಡಿ ಬುಟ್ಟ್ ಒಂದೇ ಓಟ ಓಡಿಬುಡ್ವ ತೇಳಿ ಗ್ಯಾನ ಮಾಡಿಕಂಡ್ ಅಲ್ಲಿ ಬಂದ್ ನಿತ್ತತ್, ಅಲ್ಲಿ ಸ್ವಲ್ಪ ಬಾಣೆ. ಬಾಣೆದ್ ಆಚೆ ತುದಿಲಿ ನೋಡ್ರೆ...ಅರೆ! ಎಂಥದೋ ಒಂದು ಬಿಳಿದ್ ಕಂಡದೆ! ನೋಡ್‌ತ್ತಿದ್ದಂಗೆ ದೊಡ್ಡದಾಗ್‌ತಾ ಉಟ್ಟು!! ಒಬ್ಬ ಮನುಷ್ಯನಷ್ಟ್ ಎತ್ತರ ಆತ್, ಪುನಃ ಸಣ್ಣದಾತ್. ರಾಜು ಸಣ್ಣದಿರ್‌ಕನ ಕೇಳಿತ್ತ್. ಈ ಪಿಶಾಚಿಗ ಒಂದೊಂದ್ ಸಲ ಒಂದೊಂದು ಆಕಾರಲಿ ಕಂಡವೆಗಡ. ಒಮ್ಮೆ ದೊಡ್ಡದಾದು, ಕೂಡ್ಲೆ ಸಣ್ಣದಾದುಗಡ. ಹಂಗೆ ಇಲ್ಲಿಸ ಆಗ್‌ತುಟ್ಟಲ್ಲಾ!! ರಾಜುಗೆ ಹೆದ್‌ರಿ ಜೀವನೇ ಹೋದಂಗಾತ್.

ಆ ಬಿಳೀ ಆಕೃತಿ ಅವನ ಕಡೆಗೇ ಬರ್ ತುಟ್ಟು. ತಿರ್‌ಗಿ ಓಡ್ತ್‌ತೇಳ್ರೆ, ಕ್ವಲೆ [ಪಿಶಾಚಿ] ಗಳಿಗೆ ಬೆನ್ ತೋರ್ಸಿಕೆ ಆಗದ್ ತ್ತೇಳಿ ಯಾರೋ ಹೇಳ್ದ್ ಗ್ಯಾನ ಬಂದ್ ಓಡುವ ಆಲೋಚನೆ ಕೈ ಬುಟ್ಟತ್. ಯಾವ್ಯಾವ್ದೋ ದೇವ್ರುಗಳಿಗೆ ಹರಿಕೆ ಹೇಳಿಕಂಡತ್. ಪಾಂಡಿ ಗುಳಿಗಂಗೆ ಕೋಳಿ ಕುಯ್ದನೆ. ಕಡೋಡಿ ಚಾಮುಂಡಿಗೆ ಬರುವ ವರ್ಷ ಒಂದು ಹಂದಿ ಕೊಟ್ಟನೆ....ಆಕೃತಿ ಹತ್ರ ಬಂದೇಬುಡ್ತ್. ಇನ್ ಗ್ಯಾನಮಾಡಿಕೆ ಕೂಡಾ ಸಮಯ ಇಲ್ಲೆ. ಸಾಯೋದಂತೂ ಗ್ಯಾರಂಟಿತೇಳಿ ಇಂವ ಎಂತೋ ಗ್ಯಾನಮಾಡಿ ತೆಗ್ದ್ ಅದರ ಮ್ಯಾಲೆ ಹಾರಿ ಬುಡ್ತ್.

ಅದೇ ಸಮಯಕ್ಕೆ ಆ ಆಕೃತಿ ಕೂಡಾ ಇವನ ಮ್ಯಾಲೆ ಹಾರಿ ಇವನ ಗಟ್ಟಿ ಹಿಡ್‌ಕಂಡ್ತ್. ಇಬ್ಬರೂ ಕೆಳಗೆ ಬಿದ್ದೊ. ಪುನಃ ಬುಡಿಕೆ ಧೈರ್ಯ ಇಲ್ಲೆ. "ಅಯ್ಯೋ, ಅಮ್ಮ ನಾನ್ ಸತ್ತೇ" ರಾಜು ಜೋರಾಗಿ ಬೊಬ್ಬೆ ಹಾಕಿತ್.

"ಅರೆ! ರಾಜು, ನೀನಾ, ಛೆ" ಆಕೃತಿ ಮಾತಾಡ್ತ್. ರಾಜುನ ಬುಟ್ ಮುಖನೇ ನೋಡ್ತ್. ರಾಜುಗೆ ಆಶ್ಚರ್ಯ. ಇದ್ ಪರಿಚಯದ ಸ್ವರ! ಸರೀ ಹತ್ರಂದ ನೋಡ್ತ್. ಜನ ಗೊತ್ತಾತ್! "ರಾಮಯ್ಯ ಮಾವ, ನಾನ್ ಎಂತದೋತ ತಿಳ್ಕಂಡೆ." ನನ್ನ ತಲೆಲಿದ್ದದ್ದೆಲ್ಲಾ ಪಿರ್ದ್ ಹೋತು ಅಳಿಯ" ರಾಮಯ್ಯ ಹೇಳ್ತ್ ಸಮಾದಾನಲಿ.

● **ಬಾಲಚಂದ್ರ**

ತಲಕಾವೇರಿ, ಮಡಿಕೇರಿ.

---

## : ನಗೆ ಹನಿ :

### ಹತ್ತ್ ಗಂಡಾ !

ಬೆಂಗಳೂರ್‌ನ ಸಿಂಡಿಕೇಟ್ ಬ್ಯಾಂಕ್‌ಲಿ ಒಂದು ಮಳಿಯಾಳಿ ಹೆಂಗ್ಸ್ ಕೆಲ್ಸ ಮಾಡ್‌ತಿತ್ತ್. ಅದಿಕ್ಕೆ ಕನ್ನಡ ಮಾತಾಡಿಕೆ ಸರಿಯಾಗಿ ಬಾದುಲೆ. ಅದ್ ದಿನಾ ಲೇಟಾಗಿ ಕೆಲ್ಸಕೆ ಬಾತಿತ್ತ್. ಒಂದು ದಿನ ಮ್ಯಾನೇಜರ್ ಕೇಳ್ತ್ ಯಾಕೆ ನೀನ್ ದಿನಾ ಲೇಟಾಗಿ ಬಾದುತ. ಅದ್‌ಕೆ ಆ ಹೆಂಗ್ಸ್ ಹೇಳ್ತ್ ನಾನ್ ರಾತ್ರಿ ಮಲ್ಗಾಕನ ಒಂದು ಗಂಡಾ, ಬೆಳ್‌ಗೆ ಏಳ್ವಕನ್ ಎಂಟು ಗಂಡಾ ಅದ್‌ಕೆ ಬಾಕ್‌ನ ಲೇಟಾದೆತ. ಆಗ ಮ್ಯಾನೇಜರ್ ಹೇಳ್ತ್, ಆತ್ ನೀನ್ ದಿನಾ ಹತ್‌ಗಂಡಾ ಆದ ಮ್ಯಾಲೇ ಬಾ.

● **ದೇರಜೀರ ಬೀನಾ ಬೋಪಣ್ಣ**

ಬೆಂಗಳೂರು.

# ಭಾರತದ ಸ್ವತಂತ್ರ್ಯಕ್ಕೆ ಐವತ್ತ್ ವರ್ಷ–ಒಂದು ವಿಡಂಬನೆ

ಈ ವರ್ಷದ ಆಗೋಸ್ಟ್ ಹದಿನೈದಕ್ಕೆ ನಮ್ಮ ದೇಶಕ್ಕೆ ಸ್ವತಂತ್ರ್ಯ ಸಿಕ್ಕಿ ಐವತ್ತ್ ವರ್ಷ ಆದೆ. ಹಂಗಾಗಿ ಈ ವರ್ಷಲಿ ದೇಶದ ಎಲ್ಲಾ ಕಡೆ ಸ್ವತಂತ್ರ್ಯದ 'ಚಿನ್ನದ ಹಬ್ಬ' ಆಚರಿಸುತ್ತೊಳೊ. ಅಂದರೆ ಈ ಐವತ್ತ್ ವರ್ಷಲಿ ನಮ್ಮ ದೇಶಲಿ ಏನಾದರ್ ಪ್ರಗತಿ ಆಗುಟೋ? ನಮ್ಮ ದೇಶಲಿ ಇರುವ ಪ್ರಜಾಪ್ರಭುತ್ವ ಸರಕಾರ ಜೀವಂತ ಉಟ್ಟೋ? ಇಲ್ಲೆ ನಾಶ ಆಗುತ್ತಾ ಹೋಗುತ್ತುಟ್ಟ? ಎಂಬ ಪ್ರಶ್ನೆಗ ಹುಟ್ಟಿವೆ. "ಇಂಟೆನ್ಸಿ ಕೇರ್ ಯೂನಿಟ್" (ICU) ಇಟ್ಟ ಖಾಯಿಲೆಸ್ತನ ಪರಿಸ್ಥಿತಿಲಿ ನಮ್ಮ ಪ್ರಜಾಪ್ರಭುತ್ವ ಉಸಿರಾಡುತ್ತಾ ಉಟ್ಟ್. ಟ್ಯೂಬು ತೆಗ್ದ್ರೆ ಸತ್ತದೆ! ಇಷ್ಟೆಕ್ಕೆಲ್ಲ ಕಾರಣ ಎಂತತ ಪ್ರಶ್ನೆಗ ಈಗ ಎಲ್ಲರ ತಲೆಲಿ ಹುಟ್ಟಿಟು. ಕಾರಣ ಬೇಕಾದಷ್ಟ್. ನಂಗೆ ಗೊತ್ತಿದ್ದಂಗೆ ಕೆಲವುಗಳ್ನ ನಾನು ಇಲ್ಲಿ ಬರಿತ್ತೊಳೆ.

**"ರಾಜಕೀಯ ಅಸ್ಥಿರತೆ :** 1959ರ ವರೆಗೆ ದೇಶಲಿ ಕೇಂದ್ರ ಮತ್ತೆ ಎಲ್ಲಾ ರಾಜ್ಯಗಳಲ್ಲಿ ಒಂದೇ ಪಕ್ಷ ಆಡಳಿತ [ಕಾಂಗ್ರೆಸ್] ನಡಸ್ತಾ ಇತ್ತ್. ಹಂಗಾಗಿ ದೇಶಲಿ ಸ್ತಿರತೆ ಇತ್ತ್. 1959ರ ಮೇಲೆ ಕೇರಳ, ಪಂಜಾಬ್, ಪ. ಬಂಗಾಳ ಮುಂತಾದ ಕಡೆ ಬ್ಯಾರೆ ಬ್ಯಾರೆ ಪಕ್ಷಗ ಅಧಿಕಾರಕ್ಕೆ ಬಾಕೆ ಸುರಾತ್. ಆಗ ಒಂದೇ ಪಕ್ಷ ಇರುವ ಕಡೆ [ಕೇಂದ್ರ ಮತ್ತೆ ರಾಜ್ಯಗಳೆರಡು ಕಡೆಲಿ] ಕೇಂದ್ರ ಸರಕಾರ ಆ ರಾಜ್ಯಗಳ್ನ ಸ್ವಂತ ಕೂಸುನ ನೋಡ್ದಂಗೆ ಬೇರೆ ಪಕ್ಷ ಇರುವ ರಾಜ್ಯಗಳ್ನ ತಬ್ಬಲಿ ಕೂಸುನ ನೋಡ್ದಂಗೆ, ನೋಡಿಕೆ ಸುರುಮಾಡ್ಡೋ ಹಿಂಗಾಗಿ ಕೇಂದ್ರ ರಾಜ್ಯಗ ಮುಂದೆ ಬಂಪರೆ ಇನ್ನು ಕೇಂದ್ರ ರಾಜ್ಯಗ ಹಿಂದು ಳಿತ್ತ್ ಹೋದೊ. ಅಲ್ಲಿಂದ ಮುಂದೆ ನೋಡ್ದ್ರೆ 1977ರವರೆಗೆ ಕೇಂದ್ರಲಿ ಒಂದೆ ಪಕ್ಷದ ಆಡಳಿತ ಇತ್ತ್. ಒಂದೇ ನೀತಿ ಇತ್ತ್. 1977ಲಿ ಕೇಂದ್ರಲಿ ಬೇರೆ ಸರಕಾರ ಬಾತ್. ದೇಶದ ನೀತಿನ ಕೂಡ ಬದಲಾಯಿಸಿ ಬಿಡ್ತ್. ಆಗ ಬಂದವು ಹೆಚ್ಚ್ ವರ್ಷ ಆಳಿತ್ಲೆ. ಅವರ್‌ಲೆ ಕಚ್ಚಾಟ ಆಗಿ ಪುನಃ 1980ಕ್ಕೆ ಕಾಂಗ್ರೇಸ್ ಸರಕಾರ ಬಾತ್. ಬಂದ ಕಾಂಗ್ರೆಸ್ 1989ಕ್ಕೆ ಪುನಃ ರಾಷ್ಟ್ರೀಯ ರಂಗತೇಳಿ ಸುಮಾರ್ ಪಕ್ಷಗಳ ಒಂದು ಸರಕಾರ ಬಾತ್, ಬಂದಂಗೆ ಅವರಲ್ಲೇ ಜಗಳ ಸುರಾಗಿ ಒಬ್ಬ 11 ತಿಂಗ [ವಿ. ಪಿ. ಸಿಂಗ್], ಇನ್ನೊಬ್ಬ 9 ತಿಂಗ [ಚಂದ್ರಶೇಖರ್] ಆಳ್ದೊ. ಪುನಃ 1991ಕ್ಕೆ ಕಾಂಗ್ರೇಸ್ ಅಧಿಕಾರಕ್ಕೆ ಬಾತ್ ನರಸಿಂಹರಾವ್ ಪ್ರಧಾನಮಂತ್ರಿ ಆತ್. 1991ಕ್ಕೆ ಮುಟ್ಟ ದೇಶಲಿ ಸ್ವಲ್ಪ ಮಟ್ಟಿಗೆ ಪರವಾಗಿಲ್ಲೆಂತ ಹೇಳಕ್. ಅಂದರೆ ಬ್ರಷ್ಟಚಾರ ಇಲ್ಲೆಂತಲ್ಲಾ, ಇತ್ತ್. ಆದರೆ ಈಗಿನಷ್ಟ್ ಇತ್ಲೆ. 1991ರ ಮ್ಯಾಲೆ 1996ಕ್ಕೆ ಮುಟ್ಟ ದೇಶಲಿ ಬ್ರಷ್ಟಚಾರಕ್ಕೆ ಸುಭಿಕ್ಷ ಕಾಲ. ಆಗ ದೇಶದ ಯಾವ ಮೂಲೇಲಿ ಕೇಳ್ದರೆ, ಯಾವ ಕ್ಷೇತ್ರಲಿ ಕೇಳ್ದರೆ ಹಗರಣಗಳ ರಾಶಿ. ಒಂದು ಕಡೆ ಹವಾಲ, ಇನ್ನೊಂದು ಕಡೆ ಯೂರಿಯ, ಮತ್ತೊಂದು ಕಡೆ ಕಮೀಷನ್ ಹಗರಣ, ಮಗದೊಂದು ಕಡೆ ಉಪ್ಪಿನಕಾಯಿ ಮಾರುಮನ ಲಂಚದ ಹಗರಣ, ಹಿಂಗೇ ಹಗರಣಲೇ ಕಳೆದು ಹೋತು. 5 ವರ್ಷ ಕಳೆದು ಹೋತು! ಅಲ್ಲಿಂದ ಬಾತ್ 1996ಕ್ಕೆ ರಂಗದ ಸಮ್ಮಿಶ್ರ ಸರಕಾರ. 13 ಹೆಂಗಸ್‌ಗಳಿಗೆ ಒಬ್ಬ ಗಂಡ ಇದ್ದಂಗೆ. 13ಪಕ್ಷಕ್ಕೆ ಒಬ್ಬ ಲೀಡರ್ [ಒಂದು ಹೆಣ್ಣ್‌ನ ಸುಧಾರಿಸುದು ಕಷ್ಟ. ಇಮಂಗೆ 13 ಹೆಣ್ಣ್‌ಗ] ಹಂಗೆ ಮತ್ತೊಂದು ವಿಶೇಷತ ಹೇಳಿರೆ ದೇಶನ ಆಳುವವನ, ರಾಜ್ಯದವು ನಿಯಂತ್ರಿಸುದು. ಇಷ್ಟರ ವರೆಗೆ ರಾಜ್ಯದವರನ್ನ ರಾಷ್ಟ್ರೀಯದಂವ ನಿಯಂತ್ರಿಸಿದರೆ ಈಗ ರಾಜ್ಯದವು ರಾಷ್ಟ್ರದವರ್ನ ನಿಯಂತ್ರಿಸಿಕೆ ಸುರು ಮಾಡ್ದೊ. ಮಾಡಿ ಮಾಡಿ ಹತ್ತ್ ತಿಂಗ ಆಕನ ಆ ದೇವೇಗೌಡನ ಇಳಿಸೇ ಬುಟ್ಟೊ! [ಹೆಸರಿಗೆ ಮಾತ್ರ ಸೀತರಾಮ್‌ನ ದೂರ್‌ಡ್ದೊ] ಇವನ ಇಳಿಸದಿದ್ದರೆ ತೀಹಾರ್ ಜೈಲ್ ಹತ್ತಿರ ಇನ್ನೊಂದು ಬಿಹಾರ್ ಜೈಲ್ ಕಟ್ಟಾಕಾಗಿತ್ತ್. ಏಕೆಂದರೆ ದೇವೇಗೌಡ ಹತ್ತ್ ತಿಂಗಳಲ್ಲಿ ತಿಹಾರ್ ಜೈಲ್ ಮುಕ್ಕಾಲು ತುಂಬುವಷ್ಟ್ ಪುಡಾರಿಗಳ್ನ ಹಾಕಿ ಬುಟ್ಟಿತ್ತ್. ಇನ್ನು 5 ವರ್ಷ ಆಗಿದ್ದರೆ ಅಬ್ಬಾ!

ಇನ್ನೊಂದು ಸಮಸ್ಯೆ ಎಂದರೆ ಕೋಮುವಾದ ಮತ್ತೆ ಜಾತಿವಾದಗ. ಇವೆರಡೂ ನಮ್ಮ ದೇಶಕ್ಕೆ ಶಾಪ ಇದ್ದಂಗೆ. ಆ ಬ್ರಿಟಿಷ್‌ನವ್ ಅವರ ಬೇಳೆ ಬೇಯಿಸಿಕಣಿಕ್ಕಾಗಿ "ಒಡೆದು ಆಳುವ ನೀತಿ" ಅಂತ ಹೇಳುವ ನೀತಿನ ತಂದ್ ಭಾರತಲಿ ಹಿಂದೂ ಮುಸ್ಲಿಂಗಳ್ನ ಬೇರೆ ಬೇರೆ ಮಾಡ್ದೊ. ಆ ಪರ್‌ದೇಶಿಗ ದೇಶಕ್ಕೆ ಸ್ವತಂತ್ರ್ಯ ಕೊಟ್ ಹೋದರು ಕೂಡ ಅವು ಮಾಡ್‌ದ ಒಡಕು ಮಾತ್ರ ಹೋತ್ಲೆ. ಹಂಗಾಗಿ ಎಲ್ಲಿ ನೋಡ್ದ್‌ರು ಮತೀಯ ಗಲಭೆ ಆಗುತ್ತಲೆ ಉಟ್ಟ್. ಈ ಹಾಳು ಕೋಮು ಗಲಭೆಯಿಂದಾಗಿ ಆಯೋಧ್ಯೆಯಲ್ಲಿ ಎಷ್ಟೊ ವರ್ಷಂದ ಇದ್ದ ರಾಮಮಂದಿರ—ಬಾಬರ್ ಮಸಿದಿನ ಬೀಳ್ಸಿ ಬುಟ್ಟೊ. ಇನ್ನು ಜಾತಿ ಪದ್ಧತಿ ಉಟ್ಟಲೆ. ಅದ್ ನಮ್ಮಲ್ಲಿ ಬಹಳ ಭಯಂಕರಾಗಿ ಬೆಳೇತ ಉಟ್ಟ್. ಯಾರ್ನ ಕೇಳಿ ಜಾತಿ ಬಗ್ಗೆನೆ ಮಾತಾಡ್ದ್. ಮಂತ್ರಿ ಸ್ಥಾನ ಕೊಡುವಲ್ಲಿಂದ ಹಿಡ್‌ದ್, ಜವಾನ ಸ್ಥಾನ ಕೊಡುವಲ್ಲಿವರೆಗೆ ಈ ಜಾತೀದೆ ಅತಿ ಪ್ರಭಾವ. ಕರ್ನಾಟಕನ ತಕಂಡ್ರೆ

ಲಿಂಗಯುತ್ತರದ್ ಮತ್ತೆ ಗೌಡರದ್. ತಮಿಳ್‌ನಾಡ್‌ಲಿ ವನ್ನಿಯರ್, ಚೆಟ್ಟಿಯಾರ್‌ಗಳದ್. ಆಂಧ್ರಲಿ ತಕಂಡ್ರೆ ರೆಡ್ಡಿಗಳ್‌ದ್, ತಮ್ಮಗಳದೇ ಜಾತಿ ರಾಜಕೀಯ. ಇವು ಪ್ರಜಾಪ್ರಭುತ್ವಕ್ಕೆ ಭೂಷಣ ಅಲ್ಲ. ಒಂದು ರಾಜಕೀಯ, ಇನ್ನೊಂದು ಜಾತಿವಾದ. ಹಿಂಗೆ ಬಡತನ, ಭಯೋತ್ಪಾದನೆ, ಉತ್ತರ, ದಕ್ಷಿಣ ಭಿನ್ನಾಭಿಪ್ರಾಯ, ನಿರುದ್ಯೋಗ, ದೇಶದ ಸಮಗ್ರತೆಗೆ ಪೆಟ್ಟ್ ಬೀಳುವಂತಹ ಸ್ಥಿತಿ, ಕಚ್ಚಾಟ ಪ್ರಾಂತೀಯ ಭಾವನೆ, ಬಂಡತನ, ಪುಂಡತನ. ದೇಶದಲ್ಲಿ ಪ್ರವಾಹ, ಪ್ರಕೃತಿ ವಿಕೋಪ, ಅತೀವೃಷ್ಟಿ, ಅನಾವೃಷ್ಟಿಗಳ ಹಾವಳಿ ಜನಸಂಖ್ಯಾ ಸ್ಫೋಟ, ಕಳ್ಳತನ, ವ್ಯಭಿಚಾರ, ಕೊಲೆ, ಸುಲಿಗೆ, ಇನ್ನು ಉಟ್ಟ್. ಸ್ವತಂತ್ರ್ಯ ಆಗಿ 50 ವರ್ಷ ಏನೋ ಆತ್, ಆದರೆ ನಾನ್ ಮೇಲೆ ಹೇಳ್ದ ವಿಷಯಗಒಳೊ. ಅವು ಮಾತ್ರ ಸ್ವತಂತ್ರ ಆತ್‌ಲೆ ನಮಗೆ ಸಿಕ್ಕಿದ ಸ್ವತಂತ್ರ ಬರಿ ಬ್ರಿಟಿಷ್‌ರಿಂದ ಸಿಕ್ಕಿದ ರಾಜಕೀಯ ಸ್ವತಂತ್ರ ಅಷ್ಟೆ. ಅದರ್‌ಂದ ಯಾವ ಪ್ರಯೋಜನ ಇಲ್ಲೆ. ಎಲ್ಲಿ ತನಕ ನಮಗೆ ಆರ್ಥಿಕ ಸ್ವತಂದತ್ರ್ಯ ತೇಳ್ದು ಇಲ್ಲೆನೋ ಅಲ್ಲಿಯ ತನಕ ಯಾವ ಸ್ವತಂತ್ರ್ಯಕ್ಕೆ ಬೆಲೆ ಇಲ್ಲೆ.

● ಕುಯ್ಯುಮುಡಿ
ಬಿ ಅಶ್ವಿನಿಕುಮಾರ್, ಬಾಳಲೆ

## ಪುಟ್ಟು ಹೈದನ ಪತ್ತೆ ಇಲ್ಲೆ

ದಿನಾಂಕ 9–4–97ರ ಬುಧವಾರ ಕೊಳಂಜಿ ಗದ್ದೆನ ಹೂಡಿಕಂಡಿದ್ದಂವ ಬೆಳಿಗ್ಗೆ ಹತ್ತ್ ಗಂಟೆಗೆ ಕೋಣಗಳ ನಿಲ್ಸಿ, ಹೊಸ ಪ್ಲಾಸ್ಟಿಕ್ ಗೊರ್ಗ್ಗದೊಟ್ಟಗೆ ನಾಪತ್ತೆ ಆವುಟು. ಮೂರು ಮುಕ್ಕಾಲ್ ಅಡಿಯತ್ತರ, ಸಣ್ಕಲ್ ಶರೀರ, ತೂಕ ಸುಮಾರ್ ಮೂವತ್ತೆಂಟ್ ಕೆ. ಜಿ., ಉದ್ದ ಮುಸುಂಡು, ತೋರತಲೆ, ಮೈತುಂಬ ಕರ್‍ರನೆ ಕೂದಲ್, ಪಟ್ಟೆ ಪಟ್ಟೆ ಕುಡ್ತ, ಬರ್ಮುಡಾ ಚಡ್ಡಿ, ತಲೆಲಿ ನೀಲಿ ಮಾಸ್ಲ ತೊಪ್ಪಿ, ಅದರ ಮೇಲೆ ಪೆಪ್ಸಿಂತ್ ಬರ್ದ್‌ಕೊಂಡುಟ್ಟ್, ಮಾತ್‌ಕಮ್ಮಿ, ಉಂಬೋದು ಜಾಸ್ತಿ, ಹಂಞ ಸರಾಯಿ ಕುಡಿವ ಅಭ್ಯಸನು ಉಟ್ಟ್. ಮಾತ್ ಸ್ವಲ್ಪ ಬಿಕಲ್, "ದರ್ಬಾರ್ ಬೀಡಿ ಮಾತ್ರ ಸೇದುದು. ಇಂವನ ಎಲ್ಲಿದ್ದರೂ ಪತ್ತೆ ಮಾಡಿ ಕೊಟ್ಟವುಕೆ ಒಂದ್ "ಕೊಡಗು ಸಂಗಾತಿ" ಇನಾಮು ವುಟ್ಟ್.

ಏ ಪುಟ್ಟು, ನೀನ್ ಹೋದಂದ್‌ಂದ ನಿನ್ನ ಅಯ್ಯಪ್ಪ ಎಲ್ಲಾ ಅನ್ನ ನೀರ್, ನಿದ್ದೆ ಇಲ್ಲದೆ, ಮರ್ಕ್ಟಕಂಡೆ ಕುದ್ದೊಳೋ. ಅಪ್ಪಣ್ಣನ ಬೋಳಿ ಮಂಞ್ಞ ಬಾಳ ಕುಶಿಲುಟ್ಟ್. ಮೇಲೆ ಮನೆ ಅಮ್ಮಿ ಗೂಡೆ ನಿನ್ನ ಮೊದುವೆ ಆಕೆ ಹೆಂಗಾರ್ ಒಪ್ಪಿಟ್ಟ್. ಪೊಗ್ಗು ತಿಂಗಲ್ಲಿ ಮೊದುವೆ ಮಾಡಕುಂತೇಳಿ ಚಾಮೆಪ್ಪ ಚಾಮೆವ್ವಂದ್ ಒಂದೇ ಹಟ. ಆದಂರ್ದ್ರ ನೀ ಎಲ್ಲಿದ್ದರು ಮನೆಗೆ ಬಾ. ದುಡ್ಡ್ ಗಿಡ್ಡ್ ಬೇಕರೆ ಕಾಗದ ಬರಿಬಲಾ.

ನಿನ್ನವ,

● ಕೋಳಿಮಾಡ ಎ. ತಮ್ಮಯ್ಯ
ವೈಯ್ಯಾಲಿ ಕಾವಲ್
ಬೆಂಗಳೂರು.

## : ನಗೆ ಹನಿ :

ವೈದ್ಯ : ನೆನ್ನೆ ನೀನು ಕೊಟ್ಟ ಮಾತ್ರೆಗಳನ್ನೆಲ್ಲಾ ನುಂಗಿ ನೀರು ಕುಡಿದೆಯಾ

ರೋಗಿ : ಇಲ್ಲ ಡಾಕ್ಟ್ರೆ ಮನೆಗೆ ಹೋಗಿ ಯಾವುದೋ ಜ್ಞಾನದಲ್ಲಿ ಎಲ್ಲಿಯೋ ಇಟ್ಟು ರಾತ್ರಿ ಊಟವಾದ ನಂತರ ಎಲ್ಲಿ ಇಟ್ಟದ್ದೆನೆಂದು ಜ್ಞಾಪಕಕ್ಕೆ ಬಾರದೆ, ಬೇಸತ್ತು ಹೋದೆ ಕೊನೆಗೆ ಸಿಗಲೇ ಇಲ್ಲ.

ವೈದ್ಯ : ಆ ಕಾರಣ ಈಗ ಬದುಕಿ ಬಂದಿದ್ದೀಯ.

❁ ❁ ❁

ಹೆಣ್ಣ್ : ನಿನ್ನೆ ನೀವು ಬಜಾರಿ ಮೀನಾಕ್ಷಿ ಮನೆಗೆ ಹೋಗಿದ್ದರಿಗಡ

ಗಂಡ : ನಾನೇನ್ ಅವಳ ಮನೆಗೆ ಹೋತ್ಲೆ, ಅವ್ಳೆ ನಾನಿದ್ದಲ್ಲಿಗೆ ಬಂದದ್

ಹೆಣ್ಣ್ : ಅದ್ಯಾಕೆ ಬಂದದ್

❁ ❁ ❁

ಗಂಡ : ನೀನ್ ಸತ್ತೊಳ ಅಲ್ಲ ಇನ್ನ್ ಬದಿಕ್ಕೊಳತ ಕೇಳಿಕೆ.

ಸುಭದ್ರೆ : ಯಾಕೆ ನಿಮ್ಮ ಹೆಣ್ಣ್‌ನ ಕೈನ ಅಷ್ಟ್ ಗಟ್ಟಿ ಹಿಡ್ಕೊಂಡೊಳ್ರಿ ?

ರಾಂಪಣ್ಣ : ಬುಟ್ಟನೇ. ನೀನ್ ಪಸ್ಟ್ ಕೆಳ್ಗೆ ಬಿದ್ದ ಸೆಟ್ಟ್‌ಕನ ತೆಗ್ದ್ ಹೊರಗೆ ಬಿಸಾಕ್.

● ಉಗ್ರಾಣಿ ಅಶೋಕ್ ಈರಪ್ಪ
ಮೈಸೂರು.

# ನಮ್ಮ ಭಾಸೆ ಮತ್ತೆ ನಮ್ಮ ಜೆನ

ಇಡೀ ಪ್ರಪಂಚಲಿ ನಮ್ಮ ಭಾರತ ದೇಶನೆ ಪುಣ್ಯದೇಶಂತ ಹೇಳಕ್. ಯಾಕಂತೇಳಿರೆ ಇಲ್ಲಿನ ಸುಸಂಸ್ಕೃತ ಹಿಂದೂ ಜನಾಂಗದ ಶ್ರೇಷ್ಠ ಜಾತಿಗಳ್‌ಲಿ ಗೌಡ ಜನಾಂಗವು ಒಂದು.

'ಹಿಂದು ಧರ್ಮನೆ ಸನಾತನ ಧರ್ಮ' ಅದ್ ಮಾನವೀಯ ಧರ್ಮದ ಸಾರ. ಬೇರೆ ಉಳ್ಳದ್ ಒಂದೊಂದು ಅಭಿಪ್ರಾಯದ ಪಂಗಡಗ ಮತ್ತೆ ಮತಗಾಂತ ಹೇಳಕ್. ಹಿಂದೂ ಧರ್ಮದ ಸಂಸ್ಕೃತಿನ ಮೂಲ ಆಧಾರನೇ ನಮ್ಮ ಸಮಾಜನು ಕೂಡಾ. ಭಾರತ ದೇಶದ, ಕರ್ನಾಟಕ ರಾಜ್ಯನೇ ನಮ್ಮ ಗೌಡ ಜನಾಂಗದ ನೆಲೆಮನೆ. ನಮ್ಮದ್ ಹಿಂದೂ ಜನಾಂಗದ ಒಂದು ಪ್ರಮುಖ ಶಾಖೆ. ಕೊಡಗ್, ಕನ್ನಡ ನಾಡ್‌ಲಿ ಉಟ್ಟು. ಭಾರತ ದೇಶದ ಹೆಮ್ಮೆನ ಒಂದು ರಾಜ್ಯ. ನಮ್ಮ ಮೂಲ ಭಾಸೆ ಗೌಡ ಕನ್ನಡ.

ನಮ್ಮೊವು ಹೆಚ್ಚಿಗೆ ಪಶ್ಚಿಮ ಭಾಗಲಿ ಒಳೊ. ಇಲ್ಲಿ ತುಳು ಮಾತಾಡೊ ಗೌಡರು ಸಹ ಒಳೊ. ಅದ್ ತುಳು ನುಡಿಯ ತವುರೂರ್‌ರಾದ ದಕ್ಷಿಣ ಕನ್ನಡ ಜಿಲ್ಲೆಯ ತುಳು ಜೆನರೊಟ್ಟಿಗೆ ಸೇರಿ ಕಲ್ತದ್. ಅವರ ನಡುಲಿ ಹಲವು ಶತಮಾನ ಇರ್‌ಕನ ಕ್ರಮೇಣ ಅದ್ ಅಭ್ಯಾಸ ಆಗಿ ಬಾತ್. ಮೈಸೂರು ಕಡೆ ನಿಜ ಕನ್ನಡನೇ ನಮ್ಮವು ಮಾತಾಡ್‌ವೆ. ಆದರೆ ಗೌಡ ಕನ್ನಡ ಮಾತಾಡ್‌ವ ಗೌಡ ಕುಟುಂಬಗ ಕೊಡಗ್ ಜಿಲ್ಲೆ ಮತ್ತೆ ಸುಳ್ಯ ತಾಲ್ಲೂಕ್‌ಲಿ ಮಾತ್ರ ಜಾಸ್ತಿ ಒಳೊ. ಈ ನಮ್ಮ ಗೌಡ ಕನ್ನಡಲಿ "ಭಾಷಾ ಕಾಠಿಣ್ಯ" ಇಲ್ಲೆ. ಕಮ್ಮಿ ಸಮೆಲಿ ತುಂಬಾ ಅಭಿಪ್ರಾಯನ ಹೇಳಕ್. ಶಬ್ದಗಳ್‌ಲಿ ಅಕ್ಷರ ಕಮ್ಮಿ ಇರ್ಬು. ಇದರ ವಿಶೇಷತೆ ಗೌಡ ಕನ್ನಡದ ಒಂದ್ ಪದಕ್ಕೆ ಕೆಲವೊಮ್ಮೆ ಕನ್ನಡಲಿ 2, 3 ಅರ್ಥಗ ಸಿಕ್ಕವೆ. ಹಂಗಾಗಿ ಈ ಅರೆಭಾಷೆ ಹೆಂಗೆ ಬಾತ್‌ತೇಳಿ ಓದಿದ ಮಕ್ಕ ಇದರ ಬಗ್ಗೆ ಸಂಶೋಧನೆ [ರಿಸರ್ಚ್] ಮಾಡಕು. ಆಗ ಎಲ್ಲಾ ಬೆಳಕಿಗೆ ಬಂದದೆ. ಜಗತ್ತ್‌ನ ಭಾಷೆಲಿ ನಮ್ಮ "ಗೌಡ ಕನ್ನಡ ಸರಳ ಮತ್ತೆ ಶ್ರೇಷ್ಠಂತ ಹೇಳಕ್.

**ಉದಾಹರಣೆಗೆ :**

1. ಕನ್ನಡ—ನಾನು ಹೋಗುತ್ತೇನೆ
   ಗೌಡಕನ್ನಡ—ನಾ ಹೋನೆ.
2. ನಾನು ಹಾಲು ಕುಡಿಯುತ್ತೇನೆ
   ಗೌ. ಕ. – ನಾ ಹಾಲ್ ಕುಡ್ಬನೆ.
3. ಕನ್ನಡ—ಅವಳು ಕತೆ ಬರೆಯುತ್ತಿದ್ದಾಳೆ.
   ಗೌ. ಕ. –ಅವುಳು [ಅದ್]ಕತೆ ಬರ್ದದೆ.

ಭಾಷಾ ವಿಜ್ಞಾನದ ದೃಷ್ಟಿಲಿ 'ನಮ್ಮ ಕನ್ನಡ' ಜಗತ್ತ್‌ಲಿ ಮೇಲ್, ಅದರ ಅಕ್ಷರನೂ ಮುದ್ದಾದ ರೂಪಲಿ ಉಟ್ಟು. ನಮ್ಮ ಗೌಡ ಕನ್ನಡದ ಒಂದು ನಾಲಿಗೆ ಅಂತ ಹೇಳಕ್. 'ನಾಲಿಗೆ ತೇಳ್‌ವ ಅಂಗ' ತಿಂಬಕೆ ಬೇಕ್, ಕುಡಿಯಕೆ ಬೇಕ್, ಮಾತಾಡಿಕೂ ಬೇಕ್, ಇತರರ ಪ್ರೀತಿ ಗಳಿಸಿಕೆ ಗೌರವ ಪಡಿಯಕೆ ನಾಲಿಗೆ ಬೇಕೆ ಬೇಕ್. ಅದೇ ರೀತಿ ಜಗತ್‌ನ ಭಾಸೆಲಿ ನಮ್ಮ ಗೌಡ ಕನ್ನಡನು ಸಾ.

ಈ ಪದ್ಯ ಓದಿರೆ ಗೌಡ ಕನ್ನಡದ ಹಿರಿಮೆ ಗೊತ್ತಾದೆ :

ಯಾರಿಗೆ ಗೊತ್ತುಟು ಗೌಡ ಪದದ ಅರ್ಥ?
ನಾ ಹೇಳ್ನೆ ಕೇಳಿ ನಿ ಅದರ ಮಹತ್ವ
ಜನಕೆಲ್ಲಾ ಯಜಮಾನನೇ ಗೌಡ
ಊರ್‌ನ ಪ್ರಜೆಗಳ ರಕ್ಷಕನೇ ಗೌಡ
ಅದೇ ರೀತಿಲಿ, ಭಾಷೆಲಿ ಕೂಡಾ ಕನ್ನಡನು
ಅದರ ಪೈಕಿಲಿನೂ ಮೇಲೆ ಗೌಡ ಕನ್ನಡನು
ಇಂಪಾಗಿ ಹಾಡಕ್ ನಮ್ಮ ಕನ್ನಡನಾ
ಸೊಂಪಾಗಿ ಕೇಳಕ್ ಅದರ ಧ್ವನಿನಾ
ಕಂಪು ಬೀರ್ದೆ ಲೋಕಕ್ಕೆಲ್ಲಾ ಕಸ್ತೂರಿ
ನ್ಹಾಂಗೆ
ಪೆಂಪಿನ ಕೆರೆಲಿ ಇರ್‌ವ ಮುತ್ತ್‌ನ್ಹಾಂಗೆ.

ಆದ್ದರ್‌ಂದ ನಮ್ಮ ಜೆನ ಒಂದಾಕು. ಒಗ್ಗಟ್‌ಲಿ ನಮ್ಮ ಜೀವನ ಕ್ರಮ. ಮತ್ತೆ ಆರ್ಥಿಕ ಮಟ್ಟನ ಹೆಚ್ಚಿಸಿಕಂಡ್ ನಮ್ಮ ಜನಾಂಗದ ಏಳ್ಗೆಗೆ ದುಡ್ದರೆ ಎಲ್ಲವುಕೂ ಒಳ್ಳೆದ್, ಅಲ್ಲದೆ ಪರಸ್ಪರ ಸಾಯ ಮಾಡಿಕಂಡ್ ಬಡವ ಶ್ರೀಮಂತತ ಬ್ಯೇದ ಇಸಿಕಣದೆ ಸುಖ ಸಂತೋಷಲಿ ಇರೋಕು. ನಾವ್ ಯಾರ ಮ್ಯೆಲೆ ಸಹ ಹೊಟ್ಟೆಕಿಚ್ಚಿಪಡಿಕಾಗದ್. ಯೋಗ್ಯನಾಗಿ ಗೌರವ ಕೀರ್ತಿ ಪಡ್‌ದ್ ಜೀವನನ ಸಾರ್ಥಕ ಮಾಡಿಕಣಕು. ಗೌಡ ಜನಾಂಗ ಯೋಗ್ಯ ರೀತಿಲಿ ಬೆಳ್ದರೆ ನಮ್ಮ ಭಾರತ ದೇಶದ ಹಿಂದೂ ಸಮಾಜಕ್ಕು ಉತ್ತಮ ಕೊಡುಗೆ [illegible]. ಬೆಳ್‌ದ್ ದೇಶ ಅಭಿವೃದ್ಧಿ ಆಕೆ ಸಾಧ್ಯ ಉಟ್ಟು. ಎಲ್ಲಕ್ಕಿಂತ ಹೆಚ್ಚಾಗಿ ನಮ್ಮ ಯುವ ಮಕ್ಕ [ಹೈದಂಗ ಗೊಡೆಗ] ಮುಂದೆ ಬಂದ್ ನಮ್ಮ ಸಮಾಜನ ಬೆಳಸಿಕೆ ಪ್ರಯತ್ನಿಸೊಕು. ನಾವೆಲ್ಲಾ ಕೂಡಿ ಸಮಾಜನ ಬೆಳಸಿಕೆ ಪ್ರಯತ್ನಿಸೊಕು, ನಾವೆಲ್ಲಾ ಕೂಡಿ ಬಾಳೋನು ಕೂಡಿ ನಲಿಯೋನು.

● **ಅಂಚೆಮನೆ ಸುಧಿ**
ಅಭ್ಯತ್ ಮಂಗಲ.

---

**ಕೊಡಗು ಸಂಗಾತಿನ**
**ತಗಂಡ್ ಓದಿ**



## ಚಂದಾದಾರರ ಗಮನಕ್ಕೆ

"ಕೊಡಗು ಸಂಗಾತಿ"ಯ 9ನೇ ಸಂಚಿಕೆಯು ಈಗಾಗಲೇ ನಿಮ್ಮ ಕೈಸೇರಿರುತ್ತದೆ. ಆದುದರಿಂದ ದಯಮಾಡಿ ನಿಮ್ಮ ಚಂದಾ ಹಣವನ್ನು MO ಮುಖಾಂತರ ಕಳುಹಿಸಿ ಸಹಕರಿಸಬೇಕಾಗಿ ವಿನಂತಿ. ಸಂಗಾತಿಯನ್ನು ಅಪೇಕ್ಷಿಸುವ ಬಂಧುಗಳು ತಮ್ಮ ವಿಳಾಸವನ್ನು ಅಂಚೆಕಾರ್ಡ್ ಮುಖಾಂತರ ನಮಗೆ ತಿಳಿಸಿ ಪತ್ರಿಕೆಯನ್ನು ಪಡೆದು ಕೊಳ್ಳಬಹುದು.

—ವ್ಯವಸ್ಥಾಪಕರು




## ನಿರೀಕ್ಷಿಸಿ ! !

ನಮ್ಮ ಸಂಚಿಕೆಯಿಂದ ನಮ್ಮ ನಾಡಿನಲ್ಲಿ ಅನಾದಿ ಕಾಲದಿಂದಲೂ ವಾಸಿಸುತ್ತಿದ್ದ ಜನಾಂಗದವರ ಮೂಲ ಚರಿತ್ರೆಯ ಕುರಿತ ಸವಿವರ ಲೇಖನಗಳು ಎನ್. ಎಸ್. ದೇವಿಪ್ರಸಾದ್‌ರವರ ಕುಂಚದಿಂದ ಮೂಡಿ ಬರಲಿದೆ. ಇಂದೇ ನಿಮ್ಮ ಪ್ರತಿಯನ್ನು ಕಾದಿರಿಸಿ

– ಸಂ.

---

" ಕೊಡಗು ಸಂಗಾತಿ" ಪತ್ರಿಕೆಗೆ ನಮ್ಮ ಶುಭಾಶಯಗಳು

## 'ತ್ರಿ ನೇ ತ್ರ' ರಾ ದ

**ಶ್ರೀ ಕುಯ್ಯಮುಡಿ ಪೂರ್ಣಯ್ಯ,** ಅಧ್ಯಕ್ಷರು, ಕೊಡಗು ಗೌಡ ವಿದ್ಯಾಸಂಘ, ಮಡಿಕೇರಿ

**ಶ್ರೀ ಅಂಬೆಕಲ್ಲು ಕುಶಾಲಪ್ಪ,** ವಿನೋದ್ ಮೆಡಿಕಲ್ಸ್ ಮಡಿಕೇರಿ

**ಶ್ರೀ ಬೊಳ್ನಂಡ ಪೆಮ್ಮಯ್ಯ,** ಪ್ಲಾಂಟರ್, ಕಾರುಗುಂದ

ಫೋನ್ : **26962**

---

## ಕೀರ್ತಿ ತಂದ ನಮ್ಮ ಮಕ್ಕಳು

| | |
|---|---|
| ದ್ವಿತೀಯ ಪಿ. ಯು. ಸಿ. | **ದೇವಜ್ಜನ ಗಿರೀಶ್‌ಕುಮಾರ್ ಲಕ್ಷ್ಮಕುಮಾರ್**<br>ಕುಂಬಳದಾಳು ಗ್ರಾಮ, 10ನೇ ರ್‍ಯಾಂಕ್ ವಿಜೇತ.<br>**ಕು|| ನಿಡ್ಯಮಲ್ ರೇಷ್ಮ ಅನುರಾಜ್**<br>ಭಾಗಮಂಡಲ, 17ನೇ ರ್‍ಯಾಂಕ್ ವಿಜೇತೆ. |
| ಎಂ. ಎಸ್ಸಿ :<br>ಅಂತ್ರೋಪೋಲಜಿ | **ಕು|| ಕಾಳೇರಮ್ಮನ ಭಾಮಿನಿ ರಾಘವಯ್ಯ**<br>ಅವಂದೂರು, 1ನೇ ರ್‍ಯಾಂಕ್ ವಿಜೇತ |
| ಎಂ. ಎಸ್ಸಿ.<br>ಬಾಟ್ನಿ | **ಶ್ರೀಮತಿ ಮಂಜುಳಾ ಭರತ್**<br>ಇ/ಮ ಬಾಳೇಡಿರ| ಉತ್ತಯ್ಯ<br>ಮೈಸೂರು, 3ನೇ ರ್‍ಯಾಂಕ್ ವಿಜೇತೆ |

K.R.N.N. 240

॥ ಶ್ರೀ ವೆಂಕಟರಮಣ ಪ್ರಸನ್ನ ॥

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನೆಲಮಂಗಲ ತಾಲ್ಲೂಕು, ಮಹದೇವಪುರದಲ್ಲಿ
ಕಾವೇರಿನಾಡು ವಿದ್ಯಾಸಂಸ್ಥೆಯ ಉದ್ಘಾಟನೆ ಮತ್ತು ದ್ವಿತೀಯ ವರ್ಷದ
1996-97ರ ಸಾಲಿನ ಕೈಲ್ ಮೂಹೂರ್ತ ಹಬ್ಬದ ಆಚರಣೆಯ



# ಆಹ್ವಾನ ಪತ್ರಿಕೆ

**ಕಾವೇರಿನಾಡು ಸಹಕಾರಿ ಸಂಸ್ಥೆ**

**ಕಾವೇರಿನಾಡು ವಿದ್ಯಾ ಸಂಸ್ಥೆ**

**ಕಾವೇರಿನಾಡು ರೆಸಿಡೆನ್ಸಿಯಲ್ ಇಂಗ್ಲೀಷ್ ಸ್ಕೂಲ್**

ದಿನಾಂಕ **31-8-1997**ನೇ ಭಾನುವಾರ ಪೂರ್ವಾಹ್ನ **10** ಘಂಟೆಗೆ ಜರುಗಲಿರುವ ಮೇಲೆ ಕಾಣಿಸಿದ ಸಮಾರಂಭೋತ್ಸವಕ್ಕೆ ತಾವುಗಳು ಸಂಸಾರ ಸಮೇತ ಆಗಮಿಸಿ ಕಾರ್ಯಕ್ರಮವನ್ನು ಚಂದಗಾಣಿಸಬೇಕಾಗಿ ಕೋರುವ

ತಮ್ಮ ಆಗಮನಾಭಿಲಾಷಿ

**ಶ್ರೀಮತಿ / ಶ್ರೀ ಅಮ್ಮಾಜೀರ ಎಸ್. ಪೊನ್ನಪ್ಪ**

ಸ್ಥಳ : **ಕಾಡುಕರೇನಹಳ್ಳಿ ಗ್ರಾಮ,**
**ಮಹದೇವಪುರ ಕಸಬಾ ಹೋಬಳಿ,**
**ಬೆಂಗಳೂರು ಗ್ರಾ ಜಿಲ್ಲೆ**

—: **ಕಾರ್ಯಕ್ರಮಗಳು** :—

- ಪ್ರಾರ್ಥನೆ
- ಶಾಲಾಕಟ್ಟಡದ ಅಧಿಕೃತ ಉದ್ಘಾಟನೆ
- ಶಾಲಾ ತರಗತಿಯ ಅಧಿಕೃತ ಉದ್ಘಾಟನೆ
- ಸ್ವಾಗತ ಭಾಷಣ
- ಕಾವೇರಿನಾಡು ಸಹಕಾರಿ ಸಂಸ್ಥೆಯ ಅಭಿವೃದ್ಧಿ ಮತ್ತು ಮುಂದಿನ ಕಾರ್ಯಕ್ರಮಗಳ ಪರಿಚಯ
- ಕಾವೇರಿನಾಡು ಸಹಕಾರಿ ಸಂಸ್ಥೆಯ ಸದಸ್ಯರಿಂದ ಭಾಷಣ
- ಅಧ್ಯಕ್ಷರ ಭಾಷಣ
- ವಂದನಾರ್ಪಣೆ
- ಔತಣ ಕೂಟ

---

**ಕೊಡಗು ಸಂಗಾತಿ** ಪತ್ರಿಕೆಯ ಓದುವ ಸದಸ್ಯರು ಮತ್ತು ಸರ್ವ **ಗೌಡ ಬಾಂಧವರು** ಇದನ್ನೇ ವೈಯಕ್ತಿಕ ಆಹ್ವಾನ ಪತ್ರಿಕೆ ಎಂದು ಭಾವಿಸಿ ಈ ಮೇಲಿನ ಶುಭ ಸಮಾರಂಭದಲ್ಲಿ ತಪ್ಪದೇ ಭಾಗವಹಿಸಿ ಕಾರ್ಯಕ್ರಮವನ್ನು ಚಂದಗಾಣಿಸಬೇಕಾಗಿ ಕೋರುವ.

**ಶ್ರೀಮತಿ ಮತ್ತು ಶ್ರೀ ಅಮ್ಮಾಜೀರ ಎಸ್. ಪೊನ್ನಪ್ಪ**

**ದೂರವಾಣಿ ಸಂಖ್ಯೆ : 642822**

ನಂ. 20, 1ನೇ ಮುಖ್ಯರಸ್ತೆ, 4ನೇ ಅಡ್ಡರಸ್ತೆ, ಸಾಕಮ್ಮ ಗಾರ್ಡನ್
ಬಸವನ ಗುಡಿ, ಬೆಂಗಳೂರು-560 004.

Printed by M K Thammaiah and Published by Kodagu Sangathi on behalf of Pattada P. Sheelamani and Printed at ASHIRWAD PRINTERS, 180/A, 6th Main, Vinayakanagar, Mysore-12
Published at Mysore, Editor PATTADA. P. SHEELAMANI, 322, Bhogadi Circle, Hinkal Post, Mysore-570017.